ಡಾ. ಬ್ರಹ್ಮರ್ಷಿ ಪಿತಾಮಹ ಸುಭಾಷ್ ಪತ್ರೀಜಿ ಆಶೀರ್ವಾದಗಳೊಂದಿಗೆ

# ಬ್ರಹ್ಮಜ್ಞಾನ

ತಟವರ್ತಿ ವೀರರಾಘವರಾವು

ಕನ್ನಡ ಅನುವಾದ :

**ನಾಗಜ್ಯೋತಿ**



# ಬ್ರಹ್ಮಜ್ಞಾನ

ರಚನೆ : ತಟವರ್ತಿ ವೀರರಾಘವರಾವು
ಕನ್ನಡ ಅನುವಾದ : ಉಮ ಲೋಕೇಶ್

ಶ್ರೀರಾಮ ಪಬ್ಲಿಕೇಶನ್ಸ್
ಶ್ರೀ ರಾಮಧಾಮ ಪಿರಮಿಡ್ ಧ್ಯಾನಕೇಂದ್ರ,
ನಾರಾಯಣಪ್ಪಗಾರ್ಡನ್, ವೈಟ್‌ಫೀಲ್ಡ್, ಬೆಂಗಳೂರು – 560 066

---

ಪಿರಮಿಡ್ ವ್ಯಾಲಿ ಇಂಟರ್‌ನ್ಯಾಷನಲ್
ಕೆಬ್ಬೆದೊಡ್ಡಿ ಗ್ರಾಮ, ಹಾರೋಹಳ್ಳಿ ಹೋಬಳಿ, ಕನಕಪುರ ರಸ್ತೆ, ಬೆಂಗಳೂರು

**Brahmagnana**

Edited & Published by **Srirama Publications,** Sri Ramadhama Pyaramid Dyanakendra, Narayanappa Garden, Whitefiled, Bangalore - 560 066. **M.: 9449695503, 8050082689, 9886532204**

| | | |
|---|---|---|
| ಮೊದಲನೇ ಮುದ್ರಣ | : | 2023 |
| ಹಕ್ಕುಗಳು | : | ಪ್ರಕಾಶಕರು |
| ಪ್ರಕಾಶಕರು | : | **ಶ್ರೀರಾಮ ಪಬ್ಲಿಕೇಶನ್ಸ್**<br>ಶ್ರೀ ರಾಮಧಾಮ ಪಿರಮಿಡ್ ಧ್ಯಾನಕೇಂದ್ರ,<br>ನಾರಾಯಣಪ್ಪಗಾರ್ಡನ್, ವೈಟ್‌ಫೀಲ್ಡ್,<br>ಬೆಂಗಳೂರು – 560 066<br>ಮೊ.: 9449695503, 9886532204 |
| ಬಳಸಿದ ಕಾಗದ | : | 70 ಜಿ.ಎಸ್.ಎಂ. ಮ್ಯಾಪಲಿಥೊ ಡೆಮಿ 1/8 |
| ಪ್ರತಿಗಳು | : | 1000 |
| ಬೆಲೆ | : | 70/– ರೂ |
| ಪುಟಗಳು | : | iv+68=72 |
| ಮುಖಪುಟ | : | ಚಂದ್ರಕಾಂತ ಪಟ್ಟಣ |
| ಅಕ್ಷರ ಜೋಡಣೆ | : | **ನಿರಂತರ ಸಾಯಿ ಕಮ್ಯೂನಿಕೇಷನ್ ಪ್ರೈ .ಲಿ**<br>ಮೊ: 96328 12541 |

ಮುದ್ರಣ :

**ಪೂರ್ಣಾ ಗ್ರಾಫಿಕ್ಸ್,**

ಬೆಂಗಳೂರು 9844167475

# ಸ್ವ-ಪರಿಚಯ

ನನ್ನ ಹೆಸರು ಎಚ್.ಎನ್.ಶ್ರೀನಿವಾಸ. ವೃತ್ತಿಯಲ್ಲಿ ಸಿವಿಲ್ ಇಂಜಿನಿಯರ್. ಪದವಿ ಪಡೆದ ಆರಂಭದಲ್ಲಿ, ಮೂರು ವರ್ಷಗಳ ಕಾಲ ಸರ್ಕಾರಿ ಉದ್ಯೋಗದಲ್ಲಿ ಕೆಲಸ ಮಾಡಿದ ನಂತರ, ಆ ಉದ್ಯೋಗದಲ್ಲಿ ನಿರಾಸಕ್ತಿ ಹೊಂದಿದ ನಾನು, 1990ರಲ್ಲಿ ನನ್ನ ಸ್ವಂತ ವ್ಯವಹಾರವನ್ನು ಪ್ರಾರಂಭಿಸಿದೆ. ನನ್ನ ಆಧ್ಯಾತ್ಮಿಕ ಪ್ರಯಾಣವು 1999ರಲ್ಲಿ ಎಸ್.ಎಸ್.ವೈ. ಅಂದರೆ, ಸಿದ್ಧಸಮಾಧಿ ಯೋಗ ಗುರೂಜಿಯವರಿಂದ ಪ್ರಾರಂಭವಾಯಿತು. 2004ರಲ್ಲಿ ವೀರಾಂಜನೇಯ ದೇವಾಲಯವನ್ನು ಬೆಂಗಳೂರಿನ ವೈಟ್‌ಫೀಲ್ಡ್‌ನಲ್ಲಿ ನಿರ್ಮಿಸಲಾಯಿತು. ಎಲ್ಲಾ ಆಚರಣೆಗಳು ದೇವಾಲಯದಲ್ಲಿ ನಿಯಮಿತವಾಗಿ ನಡೆಯುತ್ತಿದ್ದವು. ಆಧ್ಯಾತ್ಮದ ಬಗ್ಗೆ ನನಗೆ ಒಲವು ಹೆಚ್ಚಾದಂತೆ ನಾನು ಮತ್ತು ನನ್ನ ಪತ್ನಿ ಎಸ್.ಎನ್.ವಿಜಯಲಕ್ಷ್ಮಿ ಸೇರಿ 2008ರಲ್ಲಿ ನಾವು ದೇವಾಲಯದ ಪಕ್ಕದಲ್ಲಿ 'ಶ್ರೀ ರಾಮಧಾಮ ಧ್ಯಾನ ಮಂದಿರ' ಎಂಬ ಹೆಸರಿನ ಒಂದು ಧ್ಯಾನ ಮಂದಿರವನ್ನು ನಿರ್ಮಿಸಿದೆವು. ಇದನ್ನು ಸಿದ್ಧಸಮಾಧಿ ಯೋಗ ಸಂಸ್ಥಾಪಕರಾದ ಡಾ.ಋಷಿ ಪ್ರಭಾಕರ್ ಗುರೂಜಿಯವರು ಉದ್ಘಾಟಿಸಿದರು. ಅಲ್ಲಿ ಎಸ್.ಎಸ್.ವೈ. ಶಿಕ್ಷಕರಿಂದ ಸಾಮೂಹಿಕ ಧ್ಯಾನ ತರಬೇತಿಗಳನ್ನು ಆಯೋಜಿಸುತ್ತಿದ್ದೆವು. 2009ರಲ್ಲಿ ಬ್ರಹ್ಮರ್ಷಿ ಪಿತಾಮಹ ಡಾ.ಸುಭಾಷ್ ಪತ್ರೀಜಿಯವರು ಧ್ಯಾನ ಅಧಿವೇಶನಕ್ಕಾಗಿ ಶ್ರೀರಾಮಧಾಮ ಕೇಂದ್ರಕ್ಕೆ ಭೇಟಿ ನೀಡಿದಾಗ 'ಆನಾಪಾನಸತಿ ಧ್ಯಾನ ವಿಧಾನ'ವನ್ನು ಪರಿಚಯ ಮಾಡಿಸಿದರು. ಪತ್ರೀಜಿಯವರನ್ನು ಭೇಟಿಯಾದ ನಂತರ, ದಿನನಿತ್ಯದ ನನ್ನ ಆಧ್ಯಾತ್ಮಿಕ ಅಭ್ಯಾಸದ ಕಾಲಾವಧಿಯನ್ನು ಹೆಚ್ಚಿಸಿದೆ. ಪಿ.ಎಸ್.ಎಸ್.ಎಂ.ನ ತತ್ವಸಿದ್ಧಾಂತದಲ್ಲಿ ಗುರು–ಶಿಷ್ಯರ ಕುರಿತಾದ ಒಂದು ಪ್ರಮುಖವಾದ ಅಂಶವು ನನ್ನ ಗಮನ ಸೆಳೆಯಿತು. 'ಯಾರೂ ಶಾಶ್ವತವಾಗಿ ಗುರುಗಳಲ್ಲ, ಯಾರೂ ಶಾಶ್ವತವಾಗಿ ಶಿಷ್ಯರೂ ಅಲ್ಲ, ಅವರಿಗೆ ಅವರೇ ಗುರುಗಳು. ಮಾಸ್ಟರ್ ಆಗಿ ಬದುಕಲು ಕಲಿಯಿರಿ, ಎಂದಿಗೂ ಶಿಷ್ಯರಾಗಿಯೇ ಇರಬೇಡಿ' ಎಂಬ ಪತ್ರೀಜಿಯವರ ಮಾತುಗಳು ಆಧ್ಯಾತ್ಮದಲ್ಲಿ ನನ್ನ ಆಸಕ್ತಿಯನ್ನು ಹೆಚ್ಚಿಸಿತು. 2013ರಲ್ಲಿ ಪತ್ರೀಜಿಯವರು ನನಗೆ ಪಿರಮಿಡ್ ವ್ಯಾಲಿ

ಇಂಟರ್‌ನ್ಯಾಷನಲ್ ಟ್ರಸ್ಟ್‌ನಲ್ಲಿ ಒಬ್ಬ ಟ್ರಸ್ಟಿಯಾಗಿ ಸೇವೆ ಮಾಡುವ ಸದವಕಾಶವನ್ನು ಒದಗಿಸಿದರು.

ಇದರಲ್ಲಿ ನನಗೆ 'ನಿತ್ಯಅನ್ನದಾನ ಸೇವೆ'ಯ ಜವಾಬ್ದಾರಿಯನ್ನು ವಹಿಸಲಾಯಿತು. ಪ್ರತಿಯೊಬ್ಬ ಮಾನವನು ಮಾಧವನಾಗಬೇಕಾದರೆ ಪ್ರತಿನಿತ್ಯವೂ ಶ್ರದ್ಧೆ, ಆಸಕ್ತಿಯಿಂದ ಧ್ಯಾನಾಭ್ಯಾಸ ಮಾಡಬೇಕು. ಅದರ ಜೊತೆಯಲ್ಲಿ 'ಸಸ್ಯಾಹಾರ', 'ಸ್ವಾಧ್ಯಾಯ', 'ಸಜ್ಜನ-ಸಾಂಗತ್ಯ, ಅಂದರೆ, ಸತ್ಸಂಗ' ಹಾಗೂ 'ಪಿರಮಿಡ್ ಶಕ್ತಿ ಬಳಕೆ' ಅವಶ್ಯಕ ಎಂದು ಆಧ್ಯಾತ್ಮಶಾಸ್ತ್ರ ತಿಳಿಸುತ್ತದೆ. ನಿರಂತರ, ಸಾಧನೆಯಿಂದ ಶಾರೀರಿಕ ಆರೋಗ್ಯ, ಮಾನಸಿಕ ಪ್ರಶಾಂತತೆ, ಬುದ್ಧಿ-ವಿಕಾಸ, ಆನಂದದ ಜೀವನ, ಆತ್ಮಜ್ಞಾನ ಮುಂತಾದವುಗಳು ಲಭಿಸುವುದು. ಹೊಸ ಯುಗದ ಆಧ್ಯಾತ್ಮ ಸಾಹಿತ್ಯವನ್ನು ಸ್ವಾಧ್ಯಾಯಕ್ಕಾಗಿ ಪ್ರಕಟಿಸುವ ಹಿನ್ನೆಲೆಯಲ್ಲಿ 'ಶ್ರೀರಾಮ ಪಬ್ಲಿಕೇಶನ್ಸ್' ಹೆಸರಿನ ಪುಟ್ಟ ಪ್ರಕಾಶನ ಸಂಸ್ಥೆಯನ್ನು ಆರಂಭಿಸಲಾಯಿತು. ಪತ್ರೀಜಿಯವರ ಮತ್ತು ತಟವರ್ತಿ ವೀರರಾಘವರಾವ್ ರವರ ಆದೇಶದ ಮೇರೆಗೆ ನಮ್ಮ ಪ್ರಕಾಶನದ ವತಿಯಿಂದ ಕೆಲವು ಆಧ್ಯಾತ್ಮಿಕ ಪುಸ್ತಕಗಳನ್ನು ಪ್ರಕಟಿಸಲಾರಂಭಿಸಿದೆವು. ಕೆಲವು ಪುಸ್ತಕಗಳನ್ನು ಕನ್ನಡಕ್ಕೆ ಅನುವಾದಿಸಿ ಮುದ್ರಿಸಲಾಯಿತು. ಕೆಲವು ತೆಲುಗು ಪುಸ್ತಕಗಳನ್ನು ಮರುಮುದ್ರಣ ಮಾಡಲಾಯಿತು. ತೆಲುಗಿನ ಉತ್ತಮ ಪುಸ್ತಕಗಳು ಕನ್ನಡದ ಆಧ್ಯಾತ್ಮ ಸಾಧಕರಿಗೂ ದೊರಕಲೆಂದು ನಾವು ಇಂತಹ ಪ್ರಯತ್ನ ಮಾಡಿದ್ದೇವೆ.

ತಮ್ಮ ವಿಶ್ವಾಸಿಗಳು,

**ಎಚ್.ಎನ್.ಶ್ರೀನಿವಾಸ**
ಮತ್ತು
**ಎಸ್.ಎನ್.ವಿಜಯಲಕ್ಷ್ಮಿ**
**ಸಂಸ್ಥಾಪಕರು,**
ಶ್ರೀರಾಮಧಾಮ ಧ್ಯಾನಕೇಂದ್ರ

# ಬ್ರಹ್ಮಜ್ಞಾನ



ಈ ಬ್ರಹ್ಮಜ್ಞಾನವನ್ನು ತಿಳಿಯಲು ಆಸಕ್ತಿ ತೋರುವವರು ಹಲವಾರು ಜನರಿದ್ದಾರೆ. ಅವರ ಜೀವನವನ್ನು ಮುಡುಪಾಗಿಟ್ಟವರು, ತೊಂದರೆಗಳನ್ನು ಅನುಭವಿಸಿದವರು ಇದ್ದಾರೆ.

ಬ್ರಹ್ಮಜ್ಞಾನವನ್ನು ಪಡೆಯಬೇಕೆಂಬ ಹಂಬಲದಿಂದ ಅದನ್ನು ತಿಳಿಸುವ, ಬೋಧಿಸುವ ಗುರುಗಳಿಗಾಗಿ ಹಿಮಾಲಯಕ್ಕೆ ಕಾಡುಗಳಿಗೆ, ಏಕಾಂತ ಪ್ರದೇಶಗಳಿಗೆ, ಆಶ್ರಮಗಳಿಗೆ ಗುರುಕುಲಗಳಿಗೆ ಹೋದವರು ಇದ್ದಾರೆ. ಆಧ್ಯಾತ್ಮಿಕ ಗುರುಗಳನ್ನು, ಪೀಠಾಧಿಪತಿಗಳನ್ನು, ಯೋಗಿಗಳನ್ನು, ದೊಡ್ಡವರನ್ನು ಆಶ್ರಯಿಸಿದವರು ಇದ್ದಾರೆ.

ಬಹುತೇಕ ಜನ ಈ ಬ್ರಹ್ಮ ಜ್ಞಾನವನ್ನು ಪಡೆಯುವುದಕ್ಕಾಗಿ ಮನೆ, ಸಂಸಾರ, ಸಂಪತ್ತು, ಸಕಲ ಭೋಗ ಭಾಗ್ಯಗಳನ್ನು, ಆನಂದವನ್ನು, ಸಮಸ್ತವನ್ನು ತ್ಯಜಿಸಿ ಆ ಗುರುಗಳನ್ನು ಆಶ್ರಯಿಸಿ ಅವರ ಮುಖಾಂತರ ಈ ಬ್ರಹ್ಮ ಜ್ಞಾನವನ್ನು ಪಡೆಯಬೇಕೆಂದು ಹಾತೊರೆಯುತ್ತಿದ್ದರು. ಆ ಗುರುಗಳಿಗೆ ಹಲವಾರು ವರ್ಷಗಳ

ಕಾಲ ಸೇವೆಯನ್ನು ಮಾಡಿ ಅವರು ನೀಡುವ ಪರೀಕ್ಷೆಗಳನ್ನು ಸಹಿಸಿಕೊಂಡು... ಕಷ್ಟಗಳನ್ನು ಅನುಭವಿಸುತ್ತಾ ಈ ಬ್ರಹ್ಮ ಜ್ಞಾನವನ್ನು ಪಡೆಯಲು ಹಾತೊರೆಯುತ್ತಿದ್ದರು.

ಹೀಗೆ ಬಂದಂತಹವರನ್ನು ಕೆಲವು ಜನ ಗುರುಗಳು ಪೂರ್ತಿಯಾಗಿ ತಮ್ಮ ಸೇವೆಗಾಗಿ ಉಪಯೋಗಿಸಿಕೊಳ್ಳುತ್ತಿದ್ದರು. ಈ ರೀತಿ ಜೀವನಪರ್ಯಂತ ಸಂಬಳವನ್ನು ನೀಡದೆ ಸೇವೆ ಮಾಡಿಸಿಕೊಳ್ಳುವುದರ ಜೊತೆಗೆ ಆಶ್ರಮದಲ್ಲಿನ ಎಲ್ಲಾ ಕೆಲಸಗಳನ್ನು ಮಾಡಿಸುತ್ತಿದ್ದರು.

ಇನ್ನು ಕೆಲವು ಗುರುಗಳು ಈ ಜ್ಞಾನವು ಅವರಿಗೆ ತಿಳಿಯದೆ ಇದ್ದರೂ... ತಿಳಿದಂತೆ ನಟಿಸಿ, ತಮಗೆ ತಿಳಿದಿರುವುದರಲ್ಲಿ ಸ್ವಲ್ಪ ತಿಳಿಸಿ.. ಆ ಶಿಷ್ಯರನ್ನು ಬಹಳ ಚೆನ್ನಾಗಿ ಉಪಯೋಗಿಸಿಕೊಳ್ಳುತ್ತಿದ್ದರು. ಇನ್ನು ಕೆಲವು ಗುರುಗಳು ಬ್ರಹ್ಮ ಜ್ಞಾನ ತಿಳಿಯದೆ ಹೋದರು ಅವರ ಬಳಿ ಬಂದಂತಹ ಶಿಷ್ಯರಿಗೆ ಮೊದಲು ನೀವು ಅರ್ಹತೆಯನ್ನು ಸಂಪಾದಿಸಿಕೊಳ್ಳಿ, ಅರ್ಹತೆ ಇಲ್ಲದವರಿಗೆ ಬ್ರಹ್ಮ ಜ್ಞಾನವು ಲಭಿಸುವುದಿಲ್ಲ ಎಂದು ಹೇಳುತ್ತಿದ್ದರು.

ಇನ್ನು ಕೆಲವು ಜನ ಗುರುಗಳು ಬ್ರಹ್ಮ ಜ್ಞಾನವನ್ನು ಎಲ್ಲರಿಗೂ ಕೂಡಲೇ ಭೋದಿಸಬಾರದೆಂದು, ಬ್ರಹ್ಮ ಜ್ಞಾನವು ತಿಳಿದಿದ್ದರೂ ಅವರಿಗೆ ಹಲವಾರು ವರ್ಷಗಳ ಕಾಲ ಬೇರೆ ವಿಷಯಗಳನ್ನು ತಿಳಿಸುತ್ತಾ ಸಾಧನೆಗಳನ್ನು ಮಾಡಿಸುತ್ತಿದ್ದರು. ಹೀಗೆ ಅವರ ಬಳಿ ಇರಲಾರದೆ ಎಷ್ಟೋ ಜನ ಹೊರಟು ಹೋಗುತ್ತಿದ್ದರು. ಒಂದು ವೇಳೆ ಕೆಲವು ಜನ ಅವರ ಬಳಿ ಇದ್ದರು ಅವರಿಗೆ ಬ್ರಹ್ಮ ಜ್ಞಾನವೆಂದರೆ ಏನೆಂದು ಹೇಳಿದರು ಸಹ ಸರಿಯಾದ ಸಾಧನೆಯನ್ನು ಹೇಳಲು ಆಗುತ್ತಿರಲಿಲ್ಲ.

ಇನ್ನು ಕೆಲವು ಜನ ಗುರುಗಳು ಬ್ರಹ್ಮ ಜ್ಞಾನದ ಹೆಸರಿನಲ್ಲಿ ನಾನಾ ರೀತಿಯ ಬೋಧನೆಗಳನ್ನು ಮಾಡುತ್ತಿದ್ದರು, ಅದೇ ಬ್ರಹ್ಮ ಜ್ಞಾನ ಎನ್ನುತ್ತಿದ್ದರು.

ಈ ರೀತಿಯಾಗಿ ಸಮಾಜದಲ್ಲಿ ಬ್ರಹ್ಮ ಜ್ಞಾನವನ್ನು ಪಡೆಯಲಾರದೆ ಎಷ್ಟೋ

ಜನರು ವಿವಿಧ ಹಂತಗಳಲ್ಲಿ ವಿವಿಧ ರೀತಿಯ ತೊಂದರೆಗಳನ್ನು ಪಡುತ್ತಿದ್ದರು. ಆದ್ದರಿಂದ ಬ್ರಹ್ಮ ಜ್ಞಾನವನ್ನು ತಿಳಿಯುವ ಪ್ರಯತ್ನ ಮಾಡೋಣ..

ಬ್ರಹ್ಮನನ್ನು ತಿಳಿಯುವುದೇ "ಬ್ರಹ್ಮಜ್ಞಾನ". ಎಷ್ಟು ತಿಳಿದರೆ ಅಷ್ಟು ಜ್ಞಾನವನ್ನು ಪಡೆದಂತೆ. ಅದೇ ರೀತಿ ಈ ಬ್ರಹ್ಮನನ್ನು ಪಡೆಯುವ ಮಾರ್ಗ ಎಂದರೆ ವಿದ್ಯೆಯನ್ನು, "ಬ್ರಹ್ಮವಿದ್ಯೆ" ಎನ್ನುತ್ತಾರೆ. ಈ ಎರಡರ ಬಗ್ಗೆ ಯಾರಾದರೂ ಹೇಳಿದರೆ ಅಂದರೆ ಉಪದೇಶಿಸಿದರೆ ಅದನ್ನು "ಬ್ರಹ್ಮೋಪದೇಶ" ಎನ್ನುತ್ತಾರೆ.

ಆದ್ದರಿಂದ ಮೊದಲು 'ಬ್ರಹ್ಮ' ಬಗ್ಗೆ ತಿಳಿಯೋಣ. ಅನಂತರ ಬ್ರಹ್ಮನನ್ನು ಪಡೆಯುವ ವಿದ್ಯೆಯನ್ನು ತಿಳಿಯೋಣ.

'ಬ್ರಹ್ಮ' ಎಂದರೆ ಮಹತ್ತರವಾದದ್ದು, ಅಂದರೆ ಎಲ್ಲದಕ್ಕಿಂತ, ಎಲ್ಲರಿಗಿಂತ ಮಹತ್ತರವಾದುದು, ಅದಕ್ಕೆ ಮೀರಿರುವುದು ಬೇರೊಂದು ಇಲ್ಲ. ಅಂದರೆ ಬ್ರಹ್ಮ ಅಷ್ಟು ಮಹಾತ್ಮನು ಎಂದರ್ಥ.

'ಬ್ರಹ್ಮ'... ನಾಮ, ರೂಪ ರಹಿತರು. ಅಂದರೆ ಅವರಿಗೆ ಹೆಸರಾಗಲಿ, ರೂಪವಾಗಲಿ ಇಲ್ಲ. ಅವರು ಕ್ರಿಯಾ ರಹಿತರು. ಅಷ್ಟೇ ಅಲ್ಲದೆ ಅವರು ಸಜಾತಿಯ, ವಿಜಾತಿಯ, ಸ್ವಗತ ಬೇಧಹಿತವಾದವರು. ಇಲ್ಲಿ ಒಬ್ಬ ಮನುಷ್ಯನಿಗೂ ಮತ್ತೊಬ್ಬನಿಗೂ ಇರುವ ಸಂಬಂಧವೇ ಸಜಾತಿಯ, ಅವರಿಬ್ಬರಿಗೂ ಇರುವ ವ್ಯತ್ಯಾಸವೇ ಸಜಾತೀಯ ವ್ಯತ್ಯಾಸ. ಅದೇ ರೀತಿ ಮನುಷ್ಯನಿಗೂ ಪ್ರಾಣಿಗಳಿಗೂ ಇರುವ ಸಂಬಂಧ ವಿಜಾತಿಯ, ಮನುಷ್ಯನಿಗೂ ಪ್ರಾಣಿಗಳಿಗೂ ಇರುವ ವ್ಯತ್ಯಾಸವೇ ವಿಜಾತಿಯ ವ್ಯತ್ಯಾಸ ಎನ್ನುತ್ತಾರೆ. ಒಂದೇ ಶರೀರದಲ್ಲಿ ಒಂದು ಅಂಗಾಂಗಕ್ಕೂ ಮತ್ತೊಂದು ಅಂಗಾಂಗಕ್ಕೂ ಇರುವ ವ್ಯತ್ಯಾಸವನ್ನು ಸ್ವಗತ ವ್ಯತ್ಯಾಸ ಎನ್ನುತ್ತಾರೆ. ಅಷ್ಟೇ ಅಲ್ಲದೆ ಬ್ರಹ್ಮ ಸರ್ವವ್ಯಾಪಿ, ಅಂದರೆ ಎಲ್ಲಾ ಕಡೆ ವ್ಯಾಪಿಸಿ ಇರುವವರು, ಪರಿಪೂರ್ಣರು. ಅವರ ಬಗ್ಗೆ ಸುಮ್ಮನೆ ಏನು ಹೇಳಲು ಆಗುವುದಿಲ್ಲ. ಅವರಿಗೆ ಪರತತ್ವ, ಪರಬ್ರಹ್ಮ, ಪರಿಪೂರ್ಣ, ಚಿತ್, ಸತ್, ಬ್ರಹ್ಮ ಮುಂತಾದ ಹೆಸರುಗಳು. ಇವೆಲ್ಲವು ಮಹಾತ್ಮರು ಅವರ ಬಗ್ಗೆ ಬೋಧಿಸಲು ಇಟ್ಟಿರುವ ಹೆಸರುಗಳು ಆಗಿದೆಯೇ ಹೊರತು ಅವುಗಳೊಂದಿಗೆ ಅವರಿಗೆ ಯಾವ ಸಂಬಂಧವೂ ಇಲ್ಲ.

ಏಕೆಂದರೆ ಈ ಅನಂತವಾದ ವಿಶ್ವದಲ್ಲಿ ಅನಂತ ಲೋಕಗಳಿವೆ. ಈ ಲೋಕಗಳಲ್ಲಿನ ಜೀವಿಗಳು, ಜೀವರಾಶಿಗಳು ಎಲ್ಲವೂ ಸಹ ಅವರಿಂದಲೇ ಸೃಷ್ಟಿಸಲ್ಪಟ್ಟಿವೆ. ಆದ್ದರಿಂದಲೇ ಅವರು ಎಲ್ಲರಿಗಿಂತ ಮಹಾತ್ಮರು. ಅಷ್ಟೇ ಅಲ್ಲದೆ, ಅವರು ನಿತ್ಯರು, ಶಾಶ್ವತರು. ಅಂದರೆ ಯಾವಾಗಲೂ ಇರುವವರು, ಬದಲಾವಣೆ ಆಗದೆ ಇರುವವರು. ಕಾಲವು ಉರುಳಿದರೂ, ಯುಗಗಳು ಬದಲಾದರೂ... ಬದಲಾಗದೇ ಇರುವವರು. ಈ ಸೃಷ್ಟಿಯಲ್ಲಿ ಇಂತಹ ಲಕ್ಷಣಗಳಿಂದ ಇರುವುದು ಕೇವಲ ಅವರು ಮಾತ್ರ.

ಒಂದು ರೀತಿಯಲ್ಲಿ ಹೇಳಬೇಕೆಂದರೆ, ಈ ಲಕ್ಷಣಗಳೆಲ್ಲ ಇರುವುದರಿಂದಲೇ ಅವರನ್ನು ಸತ್ಯ ಎಂದು ಕರೆಯುತ್ತಾರೆ. ಅವರನ್ನು ಹೊರತುಪಡಿಸಿ ಬೇರೆ ಯಾವುದು ಸತ್ಯ ಅಲ್ಲ. ಇದಕ್ಕೆ ಕಾರಣ ಬ್ರಹ್ಮನನ್ನು ಹೊರತುಪಡಿಸಿ ಬೇರೆ ಯಾವುದು ನಿತ್ಯವೂ ಅಲ್ಲ, ಅಂದರೆ ಶಾಶ್ವತವೂ ಅಲ್ಲ. ಈ ಪ್ರಪಂಚದಲ್ಲಿ ಏನನ್ನು ನೋಡಿದರೂ, ಏನನ್ನು ಗಮನಿಸಿದರೂ ಯಾವುದು ಶಾಶ್ವತವಲ್ಲ ಎಂದು ಅರ್ಥವಾಗುತ್ತದೆ. ಎಲ್ಲಾ ಬದಲಾವಣೆ ಆಗುವಂತಹುದು! ಈ ಸೃಷ್ಟಿಯಲ್ಲಿ ಪ್ರತಿಯೊಂದು ಸಹ ಸೃಷ್ಟಿಸಿರುವಂತಹುದು. ಸೃಷ್ಟಿಸಲ್ಪಟ್ಟಿರುವುದು ಯಾವುದೇ ಆಗಲಿ ಸ್ವಲ್ಪ ಕಾಲ ಮಾತ್ರವಿದ್ದು ಅದೃಶ್ಯವಾಗುತ್ತದೆ. ಆದ್ದರಿಂದ ಬ್ರಹ್ಮನಿಂದ ಬೇರ್ಪಟ್ಟಿರುವ ಪ್ರತಿಯೊಂದು ಸಹ ಅಸತ್ಯಗಳು.



ಈ ಸೃಷ್ಟಿಯಲ್ಲಿ ಏನನ್ನಾದರೂ ಗಮನಿಸಿ. ಕೊನೆಗೆ, 84 ಲಕ್ಷ ಜೀವಿಗಳು, ಜೀವರಾಶಿಗಳು, ಚರ,

ಅಚರ ಎಲ್ಲವೂ ಸಹ ಸೃಷ್ಟಿಸಲ್ಪಡುತ್ತಿರುತ್ತವೆ. ಅವು ಬದಲಾವಣೆಯಾಗುತ್ತಾ, ಸ್ವಲ್ಪ ಸಮಯವಿದ್ದು, ಕೊನೆಗೆ ಅದೃಶ್ಯವಾಗುತ್ತದೆ. ಈ ಭೂಮಿ, ಚಂದ್ರ, ಸೂರ್ಯ ಅಷ್ಟೇ ಅಲ್ಲ.. ಕೋಟ್ಯಾಂತರ ಗ್ರಹಗಳು, ವಿಶ್ವ ಎಲ್ಲವೂ ಸಹ ಯಾವುದೋ ಒಂದು ದಿನ ಅಂದರೆ ಕೋಟ್ಯಾಂತರ ವರ್ಷಗಳಿಗಾದರೂ ಸರಿ ಅದೃಶ್ಯವಾಗಲೇಬೇಕು. ಅದನ್ನೇ ಸೃಷ್ಟಿಯ ಅಂತ್ಯ ಎನ್ನುತ್ತಾರೆ.

ಆದರೆ ಈ ಬದಲಾವಣೆ, ಅಂತ್ಯ ಯಾವುದು ಬ್ರಹ್ಮನಿಗೆ ಇಲ್ಲ. ಅವರು ಬದಲಾವಣೆ ಇಲ್ಲದೆ ಇರುವವರು, ಬದಲಾಗದೆ ಇರುವವರು, ಕಾಲವು ಬದಲಾಗಬಹುದು, ಯುಗಗಳು ಬದಲಾಗಬಹುದು ಆದರೆ ಬ್ರಹ್ಮನು ಬದಲಾಗುವುದಿಲ್ಲ. ಇದಕ್ಕೆ ಕಾರಣ ಅವರಿಗೆ ಹುಟ್ಟು ಇಲ್ಲ, ಸಾವು ಇಲ್ಲ. ಅವರು ಹುಟ್ಟು ಸಾವು ಇಲ್ಲದೆ ಇರುವವರು. ಅವರು ಆದಿ ಅಂತ್ಯರಹಿತರು. ಅಂದರೆ ಅವರಿಗೆ ಹುಟ್ಟುವುದು, ಬೆಳೆಯುವುದು, ಅಂತ್ಯವಾಗುವುದು ಎಂಬುದು ಇಲ್ಲ. ಕಾರಣ ಅವರು ಆದಿಯಲ್ಲಿಯೂ ಇದ್ದಾರೆ, ಅಂದರೆ ಸೃಷ್ಟಿ ಪ್ರಾರಂಭವಾಗುವುದಕ್ಕಿಂತ ಮುನ್ನ... ಮಧ್ಯದಲ್ಲಿಯೂ ಇದ್ದಾರೆ, ಅಂದರೆ ಸೃಷ್ಟಿ ಕ್ರಮ ನಡೆಯುತ್ತಿರುವಾಗಲು... ಹಾಗೆ ಸೃಷ್ಟಿ ಅಂತ್ಯವಾದರೂ ಸಹ ಇರುತ್ತಾರೆ.

ಇದಕ್ಕೆ ಕಾರಣ ಈ ಸೃಷ್ಟಿ ಅವರಿಂದಲೇ ಉದ್ಭವಿಸಿರುವುದು. ಕೊನೆಗೆ ಈ ಸೃಷ್ಟಿಯು ಅವರಲ್ಲಿಯೇ ಲೀನವಾಗುತ್ತದೆ. ಆದುದರಿಂದಲೇ ಅವರನ್ನು ಹೊರತುಪಡಿಸಿ ಬೇರೊಬ್ಬರಿಲ್ಲ ಎಂಬುದನ್ನು ಗ್ರಹಿಸಿ ತಿಳಿಸಬೇಕು. ಈ ಬ್ರಹ್ಮನನ್ನು ಆತ್ಮ ಎಂದು ಸಹ ಕರೆಯುತ್ತಾರೆ. ಈ ವಿಷಯವನ್ನು ಅಥರ್ವಣ ವೇದದಲ್ಲಿಯೂ ಸಹ ತಿಳಿಸಲಾಗಿದೆ.



# ಅಯಮಾತ್ಮಾ ಬ್ರಹ್ಮ

ಅಂದರೆ ಈ ಆತ್ಮ ಯಾವುದು ಇದೆಯೋ ಅದೇ ಬ್ರಹ್ಮ.

ಈ ಬ್ರಹ್ಮನನ್ನು ಪರಬ್ರಹ್ಮ ಎಂದು ಸಹ ಕರೆಯುತ್ತಾರೆ. ಕಾರಣ ಪರ ಎಂದರೆ ಕಾಣಿಸದೆ ಇರುವುದು, ಬ್ರಹ್ಮ ಎಂದರೆ ಮಹಾತ್ಮ. ಪರಬ್ರಹ್ಮ ಎಂದರೆ ಕಾಣಿಸದೆ ಇರುವ ಮಹಾತ್ಮ ಎಂದರ್ಥ.

ಈ ವಿಷಯವನ್ನು ಭಗವದ್ಗೀತೆಯಲ್ಲಿ ಶ್ರೀ ಕೃಷ್ಣ ಪರಮಾತ್ಮನೂ ಸಹ ಹೇಳಿದ್ದಾರೆ:

**ಶ್ಲೋಕ: ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ।**
**ಅಹಮಾದಿಶ್ಚಮಧ್ಯಂ ಚ ಭೂತಾನಾಮನ್ತ ಏವಚ॥ (ಭ.ಗೀ 10–20)**

ಅಂದರೆ ನಾನು ಆತ್ಮ. ನಾನು ಸಮಸ್ತ ಭೂತಗಳು ಅಂದರೆ ಸಮಸ್ತ ಜೀವ ರಾಶಿಗಳಲ್ಲಿಯೂ ಇದ್ದೇನೆ. ನಾನು ಆದಿಯಲ್ಲಿ ಅಂದರೆ ಈ ಸೃಷ್ಟಿಗಿಂತ ಮುನ್ನ ಇದ್ದೇನೆ. ಮಧ್ಯದಲ್ಲಿ ಅಂದರೆ ಸೃಷ್ಟಿ ನಡೆಯುತ್ತಿರುವಾಗಲೂ ಇದ್ದೇನೆ. ಹಾಗೆ ಅಂತ್ಯದಲ್ಲಿ ಅಂದರೆ ಈ ಸೃಷ್ಟಿ ಅಂತ್ಯವಾದರೂ ಸಹ ನಾನು ಇರುತ್ತೇನೆ.

ಅಷ್ಟೇ ಅಲ್ಲದೆ ಪರಬ್ರಹ್ಮನ ಬಗ್ಗೆ ಭಗವದ್ಗೀತೆಯಲ್ಲಿ ಈ ರೀತಿ ತಿಳಿಸಲಾಗಿದೆ.

**ಶ್ಲೋಕ: ಸರ್ವತಃ ಪಾಣಿಪಾದಂ ತತ್ಸರ್ವತೊ ಕ್ಷಿಶಿರೋಮುಖಮ್।**
**ಸರ್ವತಃ ಶ್ರುತಿಮ ಲ್ಲೋಕೇ ಮಾವೃತ್ಯ ತಿಷ್ಠತಿ॥ (ಭ.ಗೀ. 13–14)**

ಆ ಬ್ರಹ್ಮನಿಗೆ ಅಂದರೆ ಆತ್ಮಕ್ಕೆ ಎಲ್ಲಾ ಕಡೆಯೂ ಕೈಗಳು, ಕಾಲುಗಳಿವೆ. ಎಲ್ಲಾ ಕಡೆ ಕಣ್ಣು, ತಲೆ, ಮುಖಗಳು ಇವೆ. ಎಲ್ಲಾ ಕಡೆ ಕಿವಿಗಳನ್ನು ಹೊಂದಿದ್ದು ಸಮಸ್ತ ಲೋಕಗಳಲ್ಲಿ ಆವರಿಸಿದ್ದಾರೆ.

ಇದರ ಅರ್ಥ ಪರಬ್ರಹ್ಮನಿಗೆ ಸಮಸ್ತ ಲೋಕಗಳಲ್ಲಿಯೂ... ಸಮಸ್ತವನ್ನು ತಿಳಿಯಬಲ್ಲ ಶಕ್ತಿ ಇದೆ ಎಂಬುದನ್ನು ಗ್ರಹಿಸಬೇಕು. ಅಂದರೆ ಅವರು ಸಮಸ್ತವನ್ನು ಗಮನಿಸುತ್ತಿದ್ದಾರೆ. ಎಲ್ಲಾ ಜೀವಿಗಳು ಮಾಡುವ ಕೆಲಸಗಳನ್ನು ನೋಡುತ್ತಿದ್ದಾರೆ. ಆಲೋಚನೆಗಳನ್ನು, ಮಾತುಗಳನ್ನು ಆಲಿಸುತ್ತಿದ್ದಾರೆ. ಒಂದು ರೀತಿಯಲ್ಲಿ ಹೇಳಬೇಕೆಂದರೆ ಈ ಸೃಷ್ಟಿಯಲ್ಲಿ ಅವರಿಗೆ ತಿಳಿಯದೆ ಇರುವುದು ಏನೂ ಇಲ್ಲವೆಂದು ಅರಿಯಬೇಕು.

**ಅಷ್ಟೇ ಅಲ್ಲದೆ ಬ್ರಹ್ಮನ ಬಗ್ಗೆ ಭಗವದ್ಗೀತೆಯಲ್ಲಿ ಇನ್ನು ಈ ರೀತಿಯಲ್ಲಿ ಹೇಳಲ್ಪಟ್ಟಿದೆ:**

**ಶ್ಲೋಕ: ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಮ್।**
**ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃಚ (ಭ.ಗೀ. 13–15)**

**ಶ್ಲೋಕ: ಬಹಿರನ್ತಶ್ಚ ಭೂತಾನಾ ಮಚರಂ ಚರಮೇವ ಚ।**
**ಸೂಕ್ಷ್ಮತ್ವಾ ತ್ತದವಿಜ್ಞೇಯಂ ದೂರಸ್ಥಂ ಚಾನ್ತಿಕೇ ಚ ತತ್ (ಭ.ಗೀ. 13–16)**

**ಶ್ಲೋಕ: ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್**
**ಭೂತಭರ್ತೃ ಚ ತಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ (ಭ.ಗೀ 13–17)**

**ಶ್ಲೋಕ: ಜ್ಯೋತಿಷಾಮಪಿ ತಜ್ಜ್ಯೋತಿ ಸ್ತಮಸಃ ಪರ ಮುಚ್ಯತೇ।**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಮ್ (ಭ.ಗೀ. 13–18)**

ತಾತ್ಪರ್ಯ: ಆ ಬ್ರಹ್ಮ ಸಮಸ್ತ ಇಂದ್ರಿಯಗಳನ್ನು ಪ್ರಕಾಶಿಸುವಂತೆ ಮಾಡುತ್ತಿದ್ದರು ಸಹ ಯಾವುದಕ್ಕೂ ಸಹ ಅಂಟದೆ, ಗುಣರಹಿತವಾಗಿದೆ.

ಪ್ರಾಣಿಗಳ ಹೊರಗೆ, ಒಳಗೆ ಇರುತ್ತಾ, ಕದಲುವ, ಕದಲ್ಲದೆ ಇರುವ ಅತಿ ಸೂಕ್ಷ್ಮವಾಗಿ ಇರುವುದರಿಂದ ಅಜ್ಞಾನಿಗಳಿಗೆ ತಿಳಿಯಲಾಗದೆ ದೂರದಲ್ಲಿ, ಜ್ಞಾನಿಗಳಿಗೆ ಸಮೀಪದಲ್ಲಿ ಇದೆ.

ಬ್ರಹ್ಮನನ್ನು ವಿಭಜಿಸಲು ಸಾಧ್ಯವಾದರೂ ಪ್ರಾಣಿಗಳಿಂದ ವಿಭಜಿಸಲಾಗದೆ ಇದೆ. ಪ್ರಾಣಿಗಳನ್ನು ಸೃಷ್ಟಿಸಿ, ಪೋಷಿಸಿ ಲಯವಾಗಿಸುತ್ತಿರುವುದು ಬ್ರಹ್ಮನು ಎಂದು ತಿಳಿಯಬೇಕು.

ಬ್ರಹ್ಮನು ಸೂರ್ಯ, ಚಂದ್ರ, ಅಗ್ನಿ ಅಂತಹ ಪದಾರ್ಥಗಳಿಗೆ ಪ್ರಕಾಶವನ್ನು ನೀಡುವಂತಹುದು. ಅಜ್ಞಾನಕ್ಕಿಂತ ಭಿನ್ನವಾಗಿ ಜ್ಞಾನ ಸ್ವರೂಪವಾಗಿರುವಂಥದ್ದು. ಜ್ಞಾನ ಗುಣಗಳಿಂದ ಪಡೆಯುವಂತಹದು ಮತ್ತು ಸಮಸ್ತ ಪ್ರಾಣಿಗಳ ಹೃದಯದಲ್ಲಿ ವಿಶೇಷವಾಗಿ ಇರುವಂತಹದು ಎಂದು ಹೇಳಲ್ಪಟ್ಟಿದೆ.

ಇದರ ಅರ್ಥ ಆದಿ ಅಂತ್ಯ ಅಂದರೆ ಹುಟ್ಟು ಸಾವು ಎಲ್ಲರಿಗೂ ಎಲ್ಲದಕ್ಕೂ ಇದೆ. ಆದರೆ ಬ್ರಹ್ಮನಿಗೆ ಇಲ್ಲ. ಆದುದರಿಂದಲೇ ಆತ ಅಷ್ಟು ಮಹಾತ್ಮ. ಆದುದರಿಂದಲೇ ಅವರನ್ನು ಬ್ರಹ್ಮ ಎಂದಿದ್ದಾರೆ. ಅಷ್ಟೇ ಅಲ್ಲ ಅವರೇ ಸತ್ಯ. ಅವರನ್ನು ಹೊರತುಪಡಿಸಿ ಬೇರೆ ಯಾವುದು ಸತ್ಯ ಅಲ್ಲ. ಕಾರಣ, ಈ ಸೃಷ್ಟಿಯಲ್ಲಿ ಯಾವುದಾದರೂ ಸರಿ ಸೃಷ್ಟಿಸಲ್ಪಟ್ಟಿರುವಂತದ್ದು ಹಾಗು ಬದಲಾವಣೆ ಹೊಂದುವಂತದ್ದು. ಎಲ್ಲರಿಗಿಂತಲೂ ಬ್ರಹ್ಮನು ಮಹಾತ್ಮ. ಸತ್ಯವನ್ನು ಆಶ್ರಯಿಸಿ ಎಂದು ವೇದಗಳಲ್ಲಿ ತಿಳಿಸಿರುವ ಕಾರಣ ಸಹ ಇದೆ. ಸತ್ಯವನ್ನು ಆಶ್ರಯಿಸುವುದರಿಂದ ಪಡೆಯುವ ಫಲಿತಾಂಶಗಳನ್ನು ಈ ಪ್ರಾರ್ಥನೆಯ ಮೂಲಕ ತಿಳಿಸಲ್ಪಟ್ಟಿದೆ.

**"ಅಸತೋಮಾ ಸದ್ಗಮಯ!"**
**"ತಮಸೋಮಾ ಜ್ಯೋತಿರ್ಗಮಯ!"**
**"ಮೃತ್ಯೋರ್ಮಾ ಅಮೃತಂಗಮಯ!"**

ಅಸತೋಮ ಸದ್ಗಮಯ ಎಂದರೆ ನನ್ನನ್ನು ಅಸತ್ಯದಿಂದ ಸತ್ಯದ ಕಡೆಗೆ ನಡೆಸು ಎಂದು ಭಗವಂತನನ್ನು ಅಂದರೆ ಬ್ರಹ್ಮನನ್ನು ಪ್ರಾರ್ಥಿಸುವುದು.

ಈಗ ಎಲ್ಲರೂ ಅಸತ್ಯದಲ್ಲಿ ಜೀವಿಸುತ್ತಿದ್ದಾರೆ. ಅಸತ್ಯವನ್ನೇ ಆಶ್ರಯಿಸುತ್ತಿದ್ದಾರೆ. ಅಸತ್ಯವನ್ನೇ ನುಡಿಯುತ್ತಿದ್ದಾರೆ. ಈ ರೀತಿ ಅಸತ್ಯದಲ್ಲಿ ಜೀವಿಸಿದರೆ ಆಗುವ ನಷ್ಟವೇನು ಎಂದು ನೀವು ಭಾವಿಸಬಹುದು, ಆದರೆ ಅಸತ್ಯದಲ್ಲಿ ಇರುವವರು ಅಪಜಯವನ್ನು ಪಡೆಯುತ್ತಾರೆ.

ಆದ್ದರಿಂದಲೇ ಸತ್ಯಮೇವ ಜಯತೆ ಎಂದಿದ್ದಾರೆ. ಅಂದರೆ ಸತ್ಯವೇ ಜಯಿಸುತ್ತದೆ ಎಂದರ್ಥ.

ಕೆಲವರು, ನನ್ನ ಜೀವನವು ಬಹಳ ಚೆನ್ನಾಗಿದೆ, ಸಂಸಾರವು ಚೆನ್ನಾಗಿದೆ, ಸಂಪತ್ತು ಇದೆ. ದೊಡ್ಡ ಸಮಸ್ಯೆಗಳೇನು ಇಲ್ಲ. ತೊಂದರೆಗಳು ಇಲ್ಲ, ಏನು ಮುಟ್ಟಿದರು ಕೂಡಿ ಬರುತ್ತಿದೆ, ಎಲ್ಲಾ ರೀತಿಯಲ್ಲಿಯು ಲಾಭಗಳನ್ನು ಪಡೆಯುತ್ತಿದ್ದೇನೆ. ನಾನು ಸತ್ಯದಲ್ಲಿ ಇದ್ದರೇನು? ಅಸತ್ಯದಲ್ಲಿ ಇದ್ದರೇನು? ಎಂದು ಭಾವಿಸಬಹುದು.

ಆದರೆ ಯಾರಿಗೆ ಆಗಲಿ ಜೀವನದಲ್ಲಿ ಈ ಒಂದು ಜನ್ಮವೇ ಅಲ್ಲ. ಪ್ರತಿಯೊಬ್ಬರು ಹಲವಾರು ಜನ್ಮಗಳನ್ನು ತೆಗೆದುಕೊಂಡಿರುತ್ತಾರೆ. ಒಂದೊಂದು ಜನ್ಮದಲ್ಲಿ ಅವರು ಹಿಂದೆ ಮಾಡಿರುವಂತಹ ಕರ್ಮಗಳಿಗೆ ಅನುಸಾರವಾಗಿ ಈಗ ಜೀವನವು ಚೆನ್ನಾಗಿರಬಹುದು. ಆದರೆ, ಮತ್ತೊಂದು ಜನ್ಮ ಬಹಳ ಶೋಚನೀಯವಾಗಿ ಇರುತ್ತದೆ. ಅಸತ್ಯದಲ್ಲಿ ಜೀವಿಸುವವರು ಸತ್ಯವನ್ನು ತಿಳಿಯದೆ, ಮಾಡಬಾರದ ಕೆಲಸಗಳನ್ನು, ತಪ್ಪುಗಳನ್ನು, ಪಾಪಗಳನ್ನು ಮಾಡುತ್ತಿರುತ್ತಾರೆ. ಅದರ ಪರಿಣಾಮವಾಗಿ ಮುಂದೊಂದು ಜನ್ಮದಲ್ಲಿ ಬಹಳ ಕಷ್ಟಗಳನ್ನು ಅನುಭವಿಸಬೇಕಾಗಿ ಬರುತ್ತದೆ. ಆಗ ಈ ಜೀವನವೇಕೆ? ಎಂದನಿಸುತ್ತದೆ. ಈ ಜೀವನದಿಂದ ಹೇಗೆ ಹೊರಬರಬೇಕು? ಇಂತಹ ಜೀವನ ನನಗೆ ಬೇಡ ಅನಿಸುತ್ತದೆ.

ಈ ರೀತಿಯಾಗಿ ಪುನಃ ಪುನಃ ಜನಿಸುವುದನ್ನು ಪಿತೃಯಾನ ಎನ್ನುತ್ತಾರೆ. ಅಸತ್ಯದಲ್ಲಿ ಜೀವಿಸುವವರು 'ಪಿತೃಯಾನ'ವನ್ನು ಮಾಡಬೇಕು. 'ಪಿತೃಯಾನ'ದಲ್ಲಿ ಎಲ್ಲವೂ ಅಪಜಯ.

ಇದೆಲ್ಲವೂ ಸಹ ಸತ್ಯವು ತಿಳಿಯದೇ, ಸತ್ಯವನ್ನು ಆಶ್ರಯಿಸದ ಕಾರಣ ನಡೆದಿದೆ. ಅಂತಹ ಸಮಸ್ಯೆಗಳು, ನೋವುಗಳು, ಕಷ್ಟಗಳು, ದುಃಖದಂತಹ ಜೀವನವು ಅಪಜಯವೇ ಅಲ್ಲವೇ. ಈ ರೀತಿಯಾದ ಅಪಜಯದಿಂದ ಹೊರಬರಬೇಕೆಂದರೆ ಸತ್ಯವನ್ನು ಆಶ್ರಯಿಸಬೇಕು. ಸತ್ಯದಲ್ಲಿ ಜೀವಿಸಬೇಕು. ಅಸತೋಮ ಸದ್ಗಮಯ ಎಂದು ಪ್ರಾರ್ಥಿಸಲು ಕಾರಣವು ಸಹ ಇದೇ!

ಈಗ ನಾವು ಸತ್ಯವೆಂದರೆ ಏನು? ಅಸತ್ಯವೆಂದರೆ ಏನು? ಯಾವುದನ್ನು ಸತ್ಯ

ಎನ್ನುತ್ತಾರೆ, ಯಾವುದನ್ನು ಅಸತ್ಯ ಎನ್ನುತ್ತಾರೆ ಎಂದು ತಿಳಿದುಕೊಳ್ಳೋಣ.

ಯಾವುದಾದರೆ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿದೆಯೋ ಅದೆಲ್ಲವೂ ಅಸತ್ಯ. ಕಾರಣ ಈ ಸೃಷ್ಟಿಯಲ್ಲಿ ಯಾವುದು ನಿತ್ಯವು ಅಲ್ಲ, ಶಾಶ್ವತವು ಅಲ್ಲ. ಏನನ್ನು ಗಮನಿಸಿದರು, ಯಾವುದನ್ನು ನೋಡಿದರೂ ಎಲ್ಲವೂ ಸಹ ಅಶಾಶ್ವತ. ಎಲ್ಲರೂ ಸಹ ತಾತ್ಕಾಲಿಕ. ಎಂದೋ ಒಂದು ದಿನ ಎಲ್ಲರೂ, ಎಲ್ಲವೂ ಸಹ ಅದೃಶ್ಯವಾಗುತ್ತದೆ. ಈ ರೀತಿಯಾಗಿ ಅದೃಶ್ಯವಾಗುವುದೆಲ್ಲವೂ ಸಹ ಅಸತ್ಯಗಳು.

ಅಷ್ಟೇ ಅಲ್ಲದೆ, ಅಸತ್ಯವು ಯಾವಾಗಲೂ ಬದಲಾವಣೆ ಹೊಂದುತ್ತಿರುತ್ತದೆ, ಬದಲಾಗದೆ ಇರುವುದಿಲ್ಲ. ಆದುದರಿಂದ ಈ ಸೃಷ್ಟಿಯಲ್ಲಿ ಏನನ್ನು ಗಮನಿಸಿದರು ಎಲ್ಲವೂ ಸಹ ಬದಲಾವಣೆ ಆಗುತ್ತಿರುತ್ತದೆ. ಆದುದರಿಂದ, ಎಲ್ಲವೂ ಅಸತ್ಯಗಳು. ದಿನಗಳು ಬದಲಾಗುತ್ತವೆ, ವಾರಗಳು ಬದಲಾಗುತ್ತವೆ, ವರ್ಷಗಳು ಬದಲಾಗುತ್ತವೆ, ಕಟ್ಟ ಕಡೆಗೆ ಯುಗಗಳು ಸಹ ಬದಲಾಗುತ್ತಿರುತ್ತದೆ. 84 ಲಕ್ಷ ಜೀವಿಗಳು, ಜೀವ ರಾಶಿಗಳು ಸಹ ಬದಲಾಗುತ್ತಿರುತ್ತದೆ. ಆದುದರಿಂದ ಕಾಲ ಉರುಳಿದರು, ಯುಗಗಳು ಬದಲಾದರು, ಬದಲಾವಣೆ ಹೊಂದುವುದೆಲ್ಲವೂ ಸಹ ಅಸತ್ಯಗಳು.

ಹಾಗಿದ್ದರೆ ಯಾವುದು ನಿತ್ಯವಾದುದು? ಯಾವುದು ಶಾಶ್ವತವಾದದ್ದು? ಯಾವುದು ಬದಲಾವಣೆ ಆಗದೇ ಇರುವುದು? ಯಾವುದು ಕಾಲವು ಉರುಳಿದರು, ಯುಗಗಳು ಬದಲಾದರೂ ಬದಲಾವಣೆ ಆಗದೆ ಇರುವುದು?

ಈ ರೀತಿಯಾಗಿ ಬದಲಾವಣೆ ಆಗದೇ ಇರುವುದು ಬ್ರಹ್ಮ ಒಬ್ಬನೇ. ಆದ್ದರಿಂದಲೇ ಬ್ರಹ್ಮನು ಸತ್ಯ. ದೊಡ್ಡವರು ಅಸತ್ಯವನ್ನು ಅಲ್ಲ, ಸತ್ಯವನ್ನು ಆಶ್ರಯಿಸಿ ಎಂದು ಹೇಳಿದ್ದಾರೆ. ಇದೇ ಕಾರಣದಿಂದ ಸತ್ಯದತ್ತ ನಡೆಸು ಎಂದು ಪ್ರಾರ್ಥನೆ ಮಾಡುವುದು.

ಆದರೆ ಜಗತ್ತಿನಲ್ಲಿ ಸತ್ಯದ ಬಗ್ಗೆ ಸರಿಯಾದ ತಿಳುವಳಿಕೆ ಇಲ್ಲದೆ ಅಸತ್ಯದಲ್ಲಿ ಜೀವಿಸುತ್ತಿದ್ದಾರೆ. ಅಸತ್ಯವನ್ನು ಆಶ್ರಯಿಸುತ್ತಿದ್ದಾರೆ. ಅಸತ್ಯವನ್ನು ನುಡಿಯುತ್ತಿದ್ದಾರೆ.

ಮೇಲೆ ತಿಳಿಸಿರುವ ಬಗ್ಗೆ ಸ್ವಲ್ಪ ವಿವರವಾಗಿ ತಿಳಿದುಕೊಳ್ಳೋಣ.

ಬ್ರಹ್ಮ ಸತ್ಯವೆಂದು ತಿಳಿದುಕೊಂಡಿದ್ದೇವೆ. ಅಂದರೆ ಆತ್ಮವು ಸತ್ಯ. ಆದರೆ ಈ ಜಗತ್ತಿನಲ್ಲಿ ಎಲ್ಲರೂ ದೇಹವೇ ನಾನು ಎಂಬ ಭಾವನೆಯಿಂದ ಜೀವಿಸುತ್ತಿದ್ದಾರೆ. ದೇಹಕ್ಕೆ ಪ್ರಾಮುಖ್ಯತೆಯನ್ನು ನೀಡುತ್ತಿದ್ದಾರೆ. ಯಾವಾಗಲೂ ಶಾರೀರಿಕ ಸುಖ, ಶಾರೀರಿಕ ಸೌಂದರ್ಯ, ಶಾರೀರಿಕ ದಾರ್ಢ್ಯ, ಶಾರೀರಿಕ ಆರೋಗ್ಯ, ಶಾರೀರಿಕ ಲಾಭಕ್ಕಾಗಿ ನೋಡುತ್ತಿದ್ದಾರೆ. ಶಾರೀರಿಕ ಲಾಭಗಳಿಗಾಗಿ ಬೇಕಾಗಿರುವ ಧನ ಸಂಪಾದನೆಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುತ್ತಿದ್ದಾರೆ. ಶರೀರಕ್ಕೆ ಒಂದು ಹೆಸರು ಇಟ್ಟುಕೊಂಡು ಆ ಹೆಸರಿಗೆ ಹೆಸರು ಪ್ರಖ್ಯಾತಿ ಬರಬೇಕೆಂದು, ಪ್ರಖ್ಯಾತಿಗಳಿಗಾಗಿ ಹೋರಾಡುತ್ತಿದ್ದಾರೆ. ಸ್ವಲ್ಪ ಹೆಸರು ಬಂದರೂ ಸಂಭ್ರಮಿಸುತ್ತಿದ್ದಾರೆ.

ಈ ರೀತಿಯಾಗಿ ಯಾವಾಗಲೂ ಶರೀರ, ಶರೀರಕ್ಕೆ ಸಂಬಂಧಿಸಿದ ಸುಖಕ್ಕಾಗಿ ಜೀವಿಸುತ್ತಿದ್ದಾರೆ. ಆತ್ಮವನ್ನು ಅಂದರೆ ಸತ್ಯವನ್ನು ಅಂದರೆ ಬ್ರಹ್ಮನನ್ನು ಪೂರ್ತಿಯಾಗಿ ಮರೆಯುತ್ತಿದ್ದಾರೆ. ದೇಹವನ್ನು ಆಶ್ರಯಿಸುತ್ತಾ ಆತ್ಮವನ್ನು ಪೂರ್ತಿಯಾಗಿ ಮರೆಯುತ್ತಿದ್ದಾರೆ.

ಆತ್ಮ ಅಂದರೆ ಬ್ರಹ್ಮ, ದೇವರು ಎಂಬುದನ್ನು ಹೊರತುಪಡಿಸಿ ಉಳಿದಿರುವದೆಲ್ಲವೂ ಸಹ ಅಸತ್ಯಗಳು.

ಅಸತ್ಯಗಳನ್ನು ಯಾವಾಗಲೂ ನುಡಿಯುತ್ತಿದ್ದಾರೆ ಹೊರತು ಸತ್ಯವನ್ನು ನುಡಿಯುತ್ತಿಲ್ಲ. ಅಸತ್ಯಗಳನ್ನು ನುಡಿಯುತ್ತಿದ್ದಾರೆ ಎನ್ನಲು ಕೆಲವು ಉದಾಹರಣೆಗಳನ್ನು ನೋಡೋಣ:

**ಒಬ್ಬ ವ್ಯಕ್ತಿ ದೇವಾಲಯಕ್ಕೆ ಹೋಗಿ ಬಂದ.**
**ಹೋಗಲಿಲ್ಲ ಎಂದರೆ ಸುಳ್ಳು ಹೇಳಿದಂತೆ**
**ದೇವಸ್ಥಾನಕ್ಕೆ ಹೋಗಿದ್ದೆ ಎಂದರೆ ಅಸತ್ಯ ನುಡಿದಂತೆ**

ಕಾರಣ ದೇವಾಲಯ ಎಂದರೆ ಏನು? ಎಂದು ತಿಳಿದುಕೊಳ್ಳೋಣ. ಇಲ್ಲಿ ಆಲಯ ಎಂದರೆ.. ಇರುವ ಪ್ರದೇಶ ಎಂದು ಅರ್ಥ. ಅಲ್ಲಿ ಏನಿದ್ದರೆ ಆ ಪ್ರದೇಶವನ್ನು ಹಾಗೆ ಕರೆಯುತ್ತಾರೆ?

ನೋಡಿ ಹಿಮ ಎಂದರೆ ಮಂಜು. ಮಂಜು ಇರುವ ಪ್ರದೇಶವನ್ನು ಹಿಮಾಲಯ ಎನ್ನುತ್ತಾರೆ.

ಅದೇ ರೀತಿ ದೇವರು ಇರುವ ಪ್ರದೇಶವನ್ನು ದೇವಾಲಯ ಎನ್ನುತ್ತಾರೆ. ಆದರೆ ಇವರು ಹೋಗಿಬಂದಿರುವುದು ವಿಗ್ರಹವಿರುವ ಪ್ರದೇಶಕ್ಕೆ. ಆದುದರಿಂದ ಅದು ವಿಗ್ರಹಾಲಯ ಮಾತ್ರ.

ಹೀಗಿರುವಾಗ ನಿಜವಾದ ದೇವರು ಇರುವ ಪ್ರದೇಶ ಅಂದರೆ ದೇವಾಲಯ ಎಲ್ಲಿ ಎಂದರೆ, ಮಾನವರ ದೇಹ. ಮಾನವರ ದೇಹವೇ ನಿಜವಾದ ದೇವಾಲಯ. ಕಾರಣ ದೇವರು ಎಂದರೆ ಆತ್ಮ ಅದು ಇರುವುದು ದೇಹದಲ್ಲಿ.

ಆದುದರಿಂದ ಶಂಕರಾಚಾರ್ಯರು "ದೇಹೋ ದೇವಾಲಯೊ ಪ್ರೋಕ್ತಃ ಜೀವೊ ದೇವೊ ಸನಾತನಃ" ಎಂದಿದ್ದಾರೆ.

ಅಂದರೆ ದೇಹವೇ ದೇವಾಲಯ, ದೇಹದಲ್ಲಿ ಇರುವ ಜೀವಿಯೇ ಆತ್ಮ. ಅಂದರೆ ಆತ್ಮವೇ ಸನಾತನವಾದ ದೇವರು ಎಂದು.

ಆದರೆ ಇಲ್ಲಿ ಅವರು ಹೋಗಿರುವುದು ವಿಗ್ರಹಾಲಯಕ್ಕೆ ಹೊರತು ದೇವಾಲಯಕ್ಕೆ ಅಲ್ಲ. ಅಂದರೆ ದೇವರ ವಿಷಯದಲ್ಲಿ ಅಸತ್ಯವನ್ನು ನುಡಿದಿದ್ದಾರೆ ಹೊರತು ಸತ್ಯವನ್ನು ಹೇಳಲಿಲ್ಲ.

ಹೋಗಿರುವ ಕಡೆ ಧ್ಯಾನ ಮಾಡಿದ್ದರೆ ಆಗ ದೇವಾಲಯಕ್ಕೆ ಹೋಗಿದ್ದೆ ಎಂದು ಹೇಳಬಹುದು. ಆಗ ಮಾತ್ರ ಸತ್ಯವನ್ನು ಹೇಳಿದಂತೆ. ಧ್ಯಾನ ಮಾಡದೆ ಹೋದರೆ ಅಂದರೆ ದೇಹದೊಳಗೆ ಪ್ರವೇಶಿಸದ ಕಾರಣ ಅಸತ್ಯವನ್ನು ನುಡಿದಂತೆ.

ಅದೇ ರೀತಿ ದೇವರ ಪ್ರಸಾದವನ್ನು ತೆಗೆದುಕೊಳ್ಳಿ ಎನ್ನುತ್ತಾರೆ. ಇದು ಸಹ ಅಸತ್ಯವನ್ನು ನುಡಿದಂತೆ. ಕಾರಣ ಪ್ರಸಾದ ಎಂದರೆ ಪ್ರಸಾದಿಸಿರುವುದು ಅಂದರೆ ನೀಡಿರುವುದು ಎಂದು ಹೇಳಬಹುದು ಅಥವಾ ನಿವೇದನೆ ಮಾಡಿರುವುದು ಅಂದರೆ ತೋರಿಸಿರುವುದು ಎಂದು ಸಹ ಹೇಳಬಹುದು, ಆದರೆ ಇಲ್ಲಿ ಪೂಜಾರಿ ನೀಡಿದರೆ ಹೊರತು ದೇವರು ನೀಡಲಿಲ್ಲ. ಅಷ್ಟೇ ಅಲ್ಲದೆ ಇಲ್ಲಿ ವಿಗ್ರಹಕ್ಕೆ ನಿವೇದನೆ ಮಾಡಿದ್ದಾರೆ ಹೊರತು ದೇವರಿಗೆ ನಿವೇದನೆ ಮಾಡಲಿಲ್ಲ.



ಅದೇ ರೀತಿ ದೇವರಿಗೆ ಅಭಿಷೇಕ ಮಾಡಿಸಿದೆವು ಎಂದು ಹೇಳುತ್ತಾರೆ. ಅದು ಸಹ ಅಸತ್ಯ. ಕಾರಣ ಇವರು ಅಭಿಷೇಕ ಮಾಡಿಸಿರುವುದು ವಿಗ್ರಹಕ್ಕೆ ಹೊರತು ದೇವರಿಗೆ ಅಲ್ಲ.

ಅದೇ ರೀತಿ ದೇವರಿಗೆ ಪ್ರದಕ್ಷಿಣೆ ಮಾಡಿದ್ದೇವೆ ಎನ್ನುತ್ತಾರೆ. ಇದು ಸಹ ಅಸತ್ಯ. ಕಾರಣ ಪ್ರದಕ್ಷಿಣೆಯನ್ನು ದೇವರಿಗೆ ಮಾಡಲು ಆಗುವುದಿಲ್ಲ. ದೇವರಿಂದ ವಿಗ್ರಹಕ್ಕೆ ಮಾಡಿಸಿದ್ದಾರೆ. ದೇಹದಲ್ಲಿ ಇರುವುದು ದೇವರು. ದೇವಸ್ಥಾನದಲ್ಲಿ ಇರುವುದು ವಿಗ್ರಹ.

ಈ ರೀತಿ ಹಲವಾರು ಸಂದರ್ಭಗಳಲ್ಲಿ ದೇವರ ವಿಷಯದಲ್ಲಿ ಸತ್ಯವನ್ನಲ್ಲದೆ ಅಸತ್ಯವನ್ನೇ ನುಡಿಯುತ್ತಿದ್ದಾರೆ. ಇದಕ್ಕೆ ಕಾರಣ ಸತ್ಯದ ಬಗ್ಗೆ ಸರಿಯಾದ ತಿಳುವಳಿಕೆ ಇಲ್ಲದೆ ಇರುವುದು.

ಆದರೆ, ವೇದಗಳಲ್ಲಿ **"ಸತ್ಯಂವದ, ಧರ್ಮಂಚರ"** ಎಂದು ಹೇಳಿದ್ದಾರೆ. ಅಂದರೆ ಸತ್ಯವನ್ನು ನುಡಿಯಬೇಕು, ಧರ್ಮವನ್ನು ಆಚರಿಸಬೇಕು. ಆದುದರಿಂದ ಸತ್ಯವನ್ನೇ ನುಡಿಯಬೇಕು ಸತ್ಯವನ್ನೇ ಆಶ್ರಯಿಸಬೇಕು. ಸತ್ಯವನ್ನು ಆಶ್ರಯಿಸಿದವರಿಗೆ ಜೀವನದಲ್ಲಿ ಯಶಸ್ಸು ಎಂಬುದು ಖಚಿತ. ಆದ್ದರಿಂದ ಸತ್ಯಮೇವ ಜಯತೆ ಎಂದಿದ್ದಾರೆ.

ಯಾವ ರೀತಿಯ ಯಶಸ್ಸು ಲಭಿಸುತ್ತದೆ ಎಂದರೆ... ಸತ್ಯವನ್ನು, ಬ್ರಹ್ಮನನ್ನು ಆಶಯಿಸಿದವರಿಗೆ ಅನಂತವಾದ ಸೃಷ್ಟಿ ಜ್ಞಾನ ಲಭಿಸುತ್ತದೆ. ಇರುವುದು ಇಲ್ಲದಂತೆ, ಇಲ್ಲದೇ ಇರುವುದು ಇದ್ದಂತೆ ಅಲ್ಲದೆ, ಇರುವುದನ್ನು ಇದ್ದಂತೆ ತಿಳಿಯುತ್ತಾರೆ. ಮಾಡಬೇಕಾಗಿರುವುದನ್ನು ಮಾಡುತ್ತಾರೆ. ಮಾಡಬಾರದನ್ನು ಮಾಡುವುದಿಲ್ಲ. ಸೃಷ್ಟಿಗೆ ಅನುಗುಣವಾಗಿ ವರ್ತಿಸುತ್ತಾರೆ. ಕರ್ಮ ರಾಹಿತ್ಯ ಮಾಡಿಕೊಳ್ಳುತ್ತಾರೆ. ಜೀವನದ ಗುರಿಯನ್ನು ಸಾಧಿಸುತ್ತಾರೆ. ಜೀವನದ ಗಮ್ಯವನ್ನು ತಲುಪುತ್ತಾರೆ.

ಕೊನೆಗೆ ಭೂಮಿಯ ಮೇಲೆ ಪಡೆಯಬೇಕಿರುವ ನಿರ್ವಾಣವನ್ನು ಪಡೆಯುತ್ತಾರೆ. ಶಾಶ್ವತ ಆನಂದವನ್ನು ಪಡೆಯುತ್ತಾರೆ.

ಆಲೋಚಿಸಿ ಇದಕ್ಕಿಂತ ಸಾಧಿಸುವ ಯಶಸ್ಸು ಏನಾದರೂ ಇದೆಯೇ? ಆದ್ದರಿಂದ "ಸತ್ಯಮೇವ ಜಯತೆ" ಎಂದಿದ್ದಾರೆ.

ಬುದ್ಧನು "ಉಸಿರಾಟದ ಮೇಲೆ ಗಮನ"ವನ್ನು ಹರಿಸಿದ ಕಾರಣ ಸತ್ಯವನ್ನು ಅನುಭವದಲ್ಲಿ ಪಡೆದು ನಿರ್ವಾಣವನ್ನು ಸಾಧಿಸಿದರು. ದುಃಖದಿಂದ ಶಾಶ್ವತವಾಗಿ ಹೊರಬರುವ ಮಾರ್ಗವನ್ನು ತಿಳಿ ದರು. ಆದುದರಿಂದ ಸತ್ಯವನ್ನು ಎಂದರೆ ಬ್ರಹ್ಮನನ್ನು ಆಶ್ರಯಿಸಿ. ಅದಕ್ಕೆ ಉಸಿರಾಟದ ಮೇಲೆ ಗಮನವೊಂದೇ ಮಾರ್ಗ ಎಂದು ಭೋದಿಸಿದ್ದಾರೆ.

ಈ ರೀತಿ ಅಸತ್ಯದಿಂದ ಸತ್ಯದತ್ತ ಪ್ರವೇಶಿಸಿದವರು... ಕತ್ತಲೆಯಿಂದ ಬೆಳಕಿನತ್ತ ಪ್ರವೇಶಿಸಿದಂತೆ. ಅಂದರೆ ಅವರು ಅಜ್ಞಾನವನ್ನು ತೊಲಗಿಸಿಕೊಂಡು ಜ್ಞಾನಿಗಳಾಗುತ್ತಾರೆ.



ಆದುದರಿಂದಲೇ, "ತಮಸೋಮ ಜ್ಯೋತಿರ್ಗಮಯ" ಎಂದು ಪ್ರಾರ್ಥಿಸಲು ಹೇಳಿದ್ದಾರೆ. ಅಂದರೆ ಅಜ್ಞಾನವೆಂಬ ಅಂಧಕಾರದಿಂದ ಜ್ಞಾನವೆಂಬ ಬೆಳಕಿನತ್ತ ನಡೆಸು ಎಂದು ಪ್ರಾರ್ಥಿಸುವುದು.

ಈ ರೀತಿ ಜ್ಞಾನವಂತರಾದವರು ಕಡೆಗೆ ಹುಟ್ಟು ಸಾವಿನ ಜೀವನದಿಂದ, ಹುಟ್ಟು ಸಾವಿಲ್ಲದ ಸ್ಥಿತಿಯನ್ನು ಹೊಂದುತ್ತಾರೆ. ಅಂದರೆ ಅಮೃತತ್ವವನ್ನು ಪಡೆಯುತ್ತಾರೆ.

ಆದ್ದರಿಂದಲೇ "ಮೃತ್ಯೋರ್ಮಾ ಅಮೃತಂಗಮಯ" ಎಂದು ಪ್ರಾರ್ಥಿಸಲು ತಿಳಿಸಿದ್ದಾರೆ. ಇದನ್ನೇ ಅಮೃತತ್ವ ಎನ್ನುತ್ತಾರೆ, ಇದನ್ನೇ ಬುದ್ಧ "ನಿರ್ವಾಣ" ಎಂದಿದ್ದಾರೆ.

ಪ್ರತಿಯೊಬ್ಬ ಮಾನವನು ಸಹ ಕೊನೆಗೆ ಸಾಧಿಸಬೇಕಾಗಿರುವುದು ಇದನ್ನೇ. ನಿರ್ವಾಣವನ್ನು ಸಾಧಿಸಿದಾಗ ಮಾತ್ರ ಮಾನವರು ವಿಜಯವನ್ನು ಸಾಧಿಸಿದಂತೆ. ಇಂತಹ ವಿಜಯವನ್ನು ಸಾಧಿಸಬೇಕೆಂದರೆ ಸತ್ಯವನ್ನು ಆಶ್ರಯಿಸಬೇಕು. ಅಂದರೆ ಬ್ರಹ್ಮನನ್ನು ಆಶ್ರಯಿಸಬೇಕು. ಬ್ರಹ್ಮನನ್ನು ಆಶ್ರಯಿಸಬೇಕೆಂದರೆ ಬ್ರಹ್ಮನನ್ನು ಪಡೆಯುವ ವಿದ್ಯೆಯನ್ನು ಅಂದರೆ 'ಬ್ರಹ್ಮವಿದೆ'ಯನ್ನು ತಿಳಿದುಕೊಳ್ಳಬೇಕು.

ಆದರೆ ಈ ಲೋಕದಲ್ಲಿ ಎಲ್ಲರನ್ನೂ ಆರಾಧಿಸುತ್ತಿದ್ದಾರೆ, ಎಲ್ಲವನ್ನು ಆರಾಧಿಸುತ್ತಾ ಇದ್ದಾರೆ. ಆದರೆ ಸತ್ಯವನ್ನು ಅಂದರೆ ಆ ಪರಬ್ರಹ್ಮನನ್ನು ಆರಾಧಿಸುತ್ತಿಲ್ಲ. ಕಲ್ಲುಗಳನ್ನು ಆರಾಧಿಸುತ್ತಾರೆ, ಕಲ್ಲುಗಳಿಂದ ಮಾಡಿರುವ ಗೊಂಬೆಗಳನ್ನು ಆರಾಧಿಸುತ್ತಿದ್ದಾರೆ. ಗಿಡಮರಗಳನ್ನು, ಪ್ರಾಣಿ ಪಕ್ಷಿಗಳನ್ನು, ಗ್ರಾಮ ದೇವತೆಗಳನ್ನು, ದೇವತೆಗಳನ್ನು, ಪ್ರಕೃತಿ ದೇವತೆಗಳನ್ನು, ಗುರುಗಳನ್ನು, ಸ್ವಾಮೀಜಿಗಳನ್ನು, ಬಾಬಾರನ್ನು, ದೇವರನ್ನು ಆರಾಧಿಸುತ್ತಿದ್ದಾರೆ ಹೊರತು ಬ್ರಹ್ಮನನ್ನು ಆರಾಧಿಸುತ್ತಿಲ್ಲ. ಇದಕ್ಕೆ ಕಾರಣ ಆ ಬ್ರಹ್ಮನ ಬಗ್ಗೆಗಿನ ಅರಿವು ಇಲ್ಲದೆ ಇರುವುದು. ಬ್ರಹ್ಮನ ಹಿರಿಮೆಯ ಬಗ್ಗೆ ತಿಳಿಯದೆ ಇರುವುದು.

ಒಂದು ರೀತಿಯಲ್ಲಿ ಹೇಳಬೇಕೆಂದರೆ ಈ ಲೋಕದಲ್ಲಿ ಎಲ್ಲರಿಗೂ ದೇವರು ಮಹಿಮಾನ್ವಿತರೆಂದು ತಿಳಿದಿದೆ. ಅಷ್ಟೇ ಅಲ್ಲದೆ ಎಲ್ಲಾ ದೇವರಿಗಿಂತಲೂ ಸಹ ಬ್ರಹ್ಮ ವಿಷ್ಣು ಮಹೇಶ್ವರರು ಮಹಾಮಹಿಮಾನ್ವಿತರು ಎಂದು ಸಹ ತಿಳಿದಿದೆ. ಆದರೆ ಅವರಿಗಿಂತ ಮಹಿಮಾನ್ವಿತನು ಆ ಬ್ರಹ್ಮ. ಆದ್ದರಿಂದಲೇ ಬ್ರಹ್ಮನನ್ನು ಮೀರಿಸಿದವರು ಮತ್ತೊಬ್ಬರು ಇಲ್ಲವೆಂದು ತಿಳಿದುಕೊಳ್ಳಬೇಕು. ಇದಕ್ಕೆ ಕಾರಣ, ಇರುವುದು ಅವರು ಮಾತ್ರ.



ಆದುದರಿಂದ ತಿಳಿಯಿರಿ, ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿನ ಬ್ರಹ್ಮ ಬೇರೆ, ಈ 'ಪರಬ್ರಹ್ಮ' ಬೇರೆ. ತ್ರಿಮೂರ್ತಿಗಳಲ್ಲಿನ ಚತುರ್ಮುಖ ಬ್ರಹ್ಮ, ದೇವರಾದರೆ ಈ 'ಪರಬ್ರಹ್ಮ' 'ದೇವಾದಿ'ದೇವರು. ಅಂದರೆ ದೇವರಿಗೆ ದೇವರು.

ದೇವರು ಬೇರೆ ಬ್ರಹ್ಮ ಬೇರೆ ಬೇರೆ. ಅಷ್ಟೇ ಅಲ್ಲದೆ ಬ್ರಹ್ಮನಿಗೂ ದೇವರಿಗೂ ಬಹಳ ವ್ಯತ್ಯಾಸಗಳಿವೆ.

1) ಬ್ರಹ್ಮನಿಗೆ ರೂಪವಿಲ್ಲ, ಆದರೆ ದೇವರುಗಳಿಗೆ ರೂಪವಿದೆ.

2) ಬ್ರಹ್ಮನಿಗೆ ಹೆಸರು ಇಲ್ಲ. ಆದರೆ ದೇವರುಗಳಿಗೆ ನಾನಾ ರೀತಿಯ ಹೆಸರುಗಳಿವೆ.

3) ಬ್ರಹ್ಮ ಒಬ್ಬನೇ. ಹೆಂಡತಿ ಇಲ್ಲ. ಆದರೆ ದೇವರುಗಳಿಗೆ ಹೆಂಡತಿಯರು ಇದ್ದಾರೆ.

4) ಬ್ರಹ್ಮ ಸರ್ವತ್ರ ವ್ಯಾಪಿಸಿದ್ದಾರೆ. ಆದರೆ ದೇವರುಗಳಿಗೆ ಪ್ರದೇಶಗಳಿವೆ, ವಿಷ್ಣುಮೂರ್ತಿ ವೈಕುಂಠದಲ್ಲಿ, ಶಿವನು ಕೈಲಾಸದಲ್ಲಿ, ಬ್ರಹ್ಮನು ಬ್ರಹ್ಮ ಲೋಕದಲ್ಲಿ, ಅದೇ ರೀತಿಯಲ್ಲಿ ಉಳಿದ ದೇವರುಗಳು ಸತ್ಯ ಲೋಕದಲ್ಲಿನ ಒಂದೊಂದು ಭಾಗದಲ್ಲಿ ಇದ್ದಾರೆ.

5) ಬ್ರಹ್ಮ ಅನಂತವಾದ ಅಪರಿಮಿತವಾದ ಶಕ್ತಿ ಹೊಂದಿರುವವನು. ಆದರೆ ದೇವರುಗಳ ಪರಿಮಿತವಾದ ಶಕ್ತಿ ಇರುವವರು.

**ಉದಾಹರಣೆ :** ಪೂರ್ವ ಕಾಲದಲ್ಲಿ ಋಷಿಗಳು, ರಾಕ್ಷಸರು ಘೋರ ತಪಸ್ಸನ್ನು ಆಚರಿಸಿದಾಗ ದೇವರುಗಳು ಪ್ರತ್ಯಕ್ಷವಾಗುತ್ತಿದ್ದರು. ಆಗ ಅವರು ನನಗೆ ಸಾವಿಲ್ಲದ ವರವನ್ನು ನೀಡೆಂದು ಕೋರುತ್ತಿದ್ದರು. ಆಗ ದೇವರುಗಳು ಅದು ನನ್ನ ಕೈಯಲ್ಲಿ ಇಲ್ಲ, ಇನ್ನು ಬೇರೆ ಏನನ್ನಾದರೂ ಬೇಡು ಎನ್ನುತ್ತಿದ್ದರು. ಇದರ ಆಧಾರದಿಂದ ದೇವರುಗಳ ಶಕ್ತಿಯು ಸಹ ಪರಿಮಿತವಾದುದ್ದು ಎಂದು ತಿಳಿಯುತ್ತಿದೆ.

6) ಬ್ರಹ್ಮನಿಗೆ ಹುಟ್ಟು ಇಲ್ಲ ಸಾವು ಇಲ್ಲ. ಆದರೆ ದೇವರುಗಳೆಲ್ಲರೂ ಸಹ ತಾಯಂದಿರಿಗೆ ಜನಿಸಿದ್ದಾರೆ ಹಾಗು ಎಲ್ಲರೂ ನಿಷ್ಕ್ರಮಿಸಿದ್ದಾರೆ.

7) ಬ್ರಹ್ಮ ಮೂಲ ಚೈತನ್ಯ. ಆದರೆ ದೇವರು ಮೂಲ ಚೈತನ್ಯದಿಂದ ಉದ್ಭವಿಸಿದ ಅಂಶಗಳು ಮಾತ್ರ, ಆದರೆ,  ಜ್ಞಾನದಿಂದ ಪುರೋಗಮಿಸಿ ಪೂರ್ಣ ಜ್ಞಾನದಿಂದ ಪೂರ್ಣಾತ್ಮರಂತೆ ಬದಲಾದರು.

ಈ ವಿಷಯವನ್ನು "ಈಶಾವಾಸ್ಯ ಉಪನಿಷತ್" ನಲ್ಲಿ ಈ ಶ್ಲೋಕದ ಮೂಲಕ ತಿಳಿಸಿದ್ದಾರೆ:

**ಶ್ಲೋಕ: ಓಂಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೆ।**

**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವ ವಶಿಷ್ಯತೇ॥**

**ತಾತ್ಪರ್ಯ:** ಅದು ಪೂರ್ಣ ಅಂದರೆ ಬ್ರಹ್ಮನು ಪೂರ್ಣ. ಇದು ಪೂರ್ಣ ಎಂದರೆ ಬ್ರಹ್ಮನಿಂದ ಬೇರ್ಪಟ್ಟು ಜೀವಿಯಲ್ಲಿ ಪ್ರವೇಶಿಸಿರುವ ಜೀವಾತ್ಮನು ಸಹ ಪೂರ್ಣ.

ಆ ಪೂರ್ಣ ವಸ್ತುವಿನಿಂದ ಅಂದರೆ ಬ್ರಹ್ಮನಿಂದ ಉದ್ಭವಿಸಿದ ಈ ಪೂರ್ಣ ವಸ್ತುವು ಅಂದರೆ 'ಜೀವಿಯು' ವಿದ್ಯೆಯಿಂದ (ಜ್ಞಾನದಿಂದ) ಪೂರ್ಣತ್ವವನ್ನು ಸಾಧಿಸಿದ ಪಕ್ಷದಲ್ಲಿ ಪೂರ್ಣವಾದ ಪರಮಾತ್ಮನಂತೆ ಉಳಿಯುತ್ತದೆ. ಅಂದರೆ ಬ್ರಹ್ಮನಂತೆ ವಿರಾಜಿಸುತ್ತದೆ. ಅಂದರೆ ಪೂರ್ಣತ್ಮನಂತೆ ರೂಪುಗೊಳ್ಳುತ್ತದೆ. ಸಹ ಸೃಷ್ಟಿಕರ್ತ ಕೋ – ಕ್ರಿಯೆಟರ್ ಆಗುತ್ತದೆ.

ಅಂತಹ ಬ್ರಹ್ಮನನ್ನು ಮುಸಲ್ಮಾನರು 'ಅಲ್ಲಾ' ಎಂದು ಕರೆಯುತ್ತಾರೆ. ಕ್ರಿಶ್ಚನ್ನರು 'ತಂದೆ' ಎಂದು ಕರೆಯುತ್ತಾರೆ. ಹಿಂದೂಗಳು ಹಲವಾರು ಹೆಸರುಗಳಿಂದ ಕರೆಯುತ್ತಾರೆ. 'ಆದಿಶಕ್ತಿ', 'ಪರಾಶಕ್ತಿ', 'ಲಲಿತಾ', 'ಪರಬ್ರಹ್ಮ', 'ಪರಮಾತ್ಮ', 'ವಿಶ್ವಾತ್ಮ', ಹೀಗೆ ನಾನಾ ರೀತಿಯ ಹೆಸರುಗಳಿಂದ ಕರೆಯುತ್ತಾರೆ. ಆದ್ದರಿಂದ ದೇವರು ಬೇರೆ ಬ್ರಹ್ಮ ಬೇರೆ ಎಂದು ತಿಳಿಯಿರಿ. ಬ್ರಹ್ಮನ ಹಿರಿಮೆಯನ್ನು ಮಾತುಗಳಲ್ಲಿ ವರ್ಣಿಸಲು ಸಾಧ್ಯವಿಲ್ಲ, ಸಾಧ್ಯವಾಗುವುದಿಲ್ಲ. ಒಂದು ವಿಧದಲ್ಲಿ ಹೇಳಬೇಕೆಂದರೆ ಮಾನವ ಇಂದ್ರಿಯಗಳಿಗೆ ಆ ಶಕ್ತಿ ಇಲ್ಲವೆಂದು ಹೇಳಬೇಕು. ಅಂತಹ ಮಹಾತ್ಮನು ಆ ಬ್ರಹ್ಮ.

ಈ ವಿಷಯವನ್ನು 'ಗುರುಗೀತೆ'ಯಲ್ಲಿ ಪರಮೇಶ್ವರನು ಪಾರ್ವತಿ ದೇವಿಗೆ ಈ ರೀತಿಯಾಗಿ ಬೋಧಿಸಿದ್ದಾರೆ.



# ಗುರು ಗೀತೆ!

## ಪಾರ್ವತಿ ದೇವಿಯ ಸಂದೇಹಗಳಿಗೆ ಪರಮಶಿವನ ಉತ್ತರ:

## ಪಾರ್ವತಿದೇವಿ ಪರಮಶಿವನೊಂದಿಗೆ



ಶ್ಲೋಕ: ಓಂ ನಮೋದೇವ! ದೇವೇಶ! ಪರಾತ್ಪರ! ಜಗದ್ಗುರೊ!
ತ್ವಾಂ ನಮ ಸ್ಕುರ್ವತೇ ಭಕ್ತ್ಯಾ ಸುರಾಸುರನರಾ ಸ್ಸದಾ॥

ಶ್ಲೋಕ: ವಿಧಿವಿಷ್ಣು ಮಹೇಂದ್ರಾದ್ಯೈ ರ್ವಂದ್ಯಂ ಖಲು ಸದಾ ಭವಾನ್
ನಮ ಸ್ಕರೊಷಿ ಕಸ್ಮೈತ್ವಂ ನಮಸ್ಕಾರಾತ್ರಯಃ ಕಿಲ॥

**ಶ್ಲೋಕ: ದೃಷ್ಟ್ವಾ ಏತತ್ ಕರ್ಮ ವಿಪುಲಂ ಆಶ್ಚರ್ಯಂ ಪ್ರತಿಭಾತಿಮೆ**
**ಕಿಮೆ ತನ್ನವಿಜಾನೇಹಂ ಕೃಪಯಾ ವದ ಮೇ ಪ್ರಭೋ!॥**

ತಾತ್ಪರ್ಯ: ಓ ದೇವಾ! ದೇವೇಶಾ! ಪರಾತ್ಪರಾ! ಜಗದ್ಗುರು! ದೇವತೆಗಳು, ರಾಕ್ಷಸರು, ಮನುಷ್ಯರು ನಿರಂತರವು ಭಕ್ತಿಯಿಂದ ನಿಮಗೆ ನಮಸ್ಕರಿಸುತ್ತಿದ್ದಾರೆ.

ಮಹೇಶ್ವರಾ! ನೀವು ಬ್ರಹ್ಮ ವಿಷ್ಣು ಮಹೇಂದ್ರರಿಂದ ಸದಾ ಸ್ತುತಿಸಲ್ಪಡುತ್ತಿದ್ದೀರಿ. ಸರ್ವದೇವತೆಗಳು ನಮಸ್ಕರಿಸಲು ನೀವು ಅರ್ಹರಾಗಿರುವಂತವರು. ಅಂತಹ ನೀವು ಯಾರಿಗೆ ನಮಸ್ಕರಿಸುತ್ತಿದ್ದೀರಿ?

ನೀವು ನಮಸ್ಕರಿಸುತ್ತಿರುವುದನ್ನು ನೋಡಿ ನಾನು ಆಶ್ಚರ್ಯ ಕೊಳ್ಳಾಗುತ್ತಿದ್ದೇನೆ. ಈ ನಮಸ್ಕಾರಕ್ಕೆ ಕಾರಣವೇನೆಂದು ನನಗೆ ತಿಳಿಯುತ್ತಿಲ್ಲ. ಆದುದರಿಂದ ಓ ಪ್ರಭು, ದಯವಿಟ್ಟು ಈ ವಿಷಯವನ್ನು ನನಗೆ ತಿಳಿಸಿ.

## ಪರಮೇಶ್ವರನು:

**ಶ್ಲೋಕ: ಅಜೋಹ ಮಜರಂ ನಿತ್ಯಮನಾದಿಂ ನಿತ್ಯತಾಂ ಗತಂ**
**ಅರ್ಜವಿಕಾರಂ ಚಿದಾನಂದಂ ಪ್ರಣವಾಂತಾಂ ಸ್ಮರಾಮ್ಯಹಂ॥**

ತಾತ್ಪರ್ಯ: ದೇವಿ, ನಾನು ಜನನ ಮರಣ ಇಲ್ಲದೆ ಇರುವವನು, ಜನ್ಮ ಬಂಧನಗಳು ಇಲ್ಲದೆ ಇರುವವನು, ಮೃತ್ಯುಂಜಯನು. ಆದರೆ ನಾನು ನನ್ನ ಹೃದಯದಲ್ಲಿರುವ ಪರಬ್ರಹ್ಮನನ್ನು ನಿರಂತರವು ನಿತ್ಯವೂ ಆರಾಧಿಸುತ್ತಿದ್ದೇನೆ.

ಪರಬ್ರಹ್ಮನು ಕಾಲಾತೀತನು, ನಿತ್ಯ ಚೈತನ್ಯನು, ಬ್ರಹ್ಮನಿಗೆ ವಾರ್ಧಕ್ಯ, ನಾಶ ಇಲ್ಲ. ಅವರು ಅನಂತ, ಶಾಶ್ವತ, ಆದಿ ಅಂತ್ಯ ಇಲ್ಲದೆ ಇರುವವರು, ಪರಿಣಾಮವನ್ನು ಹೊಂದದೆ ಇರುವವರು. ಪರಬ್ರಹ್ಮ ಎಂದರೆ ವಿಶ್ವಚೈತನ್ಯ, ಸಚ್ಚಿದಾನಂದವನ್ನು ಮೀರಿರುವ ಬ್ರಹ್ಮಾನಂದ.

ನನ್ನಂತೆಯೇ ಪ್ರತಿಯೋಗಿ ಪ್ರತಿಸಾಧಕನು ತನ್ನ ಹೃದಯದಲ್ಲಿ ಚಿದಾಕಾಶದಂತೆ ಅಂಗುಷ್ಠಮಾತ್ರನಾಗಿ ಹೊಳೆಯುವ ಪುರುಷನನ್ನು, ಜೀವಿಯನ್ನು, ಜ್ಯೋತಿಯನ್ನು ಆರಾಧಿಸಬೇಕು. ಮನುಷ್ಯನಾಗಿ ಜನಿಸಿರುವ ಪ್ರತಿಜೀವಿಗು ಪರಂಜ್ಯೋತಿಯ ದರ್ಶನವು ಪ್ರಥಮ ಆಶಯವಾಗಬೇಕು.

## ಪಾರ್ವತಿ ದೇವಿ:

**ಶ್ಲೋಕ: ಕೇನ ಮಾರ್ಗೇಣ ಲೊ ಸ್ವಾಮಿನ್ ದೇಹಿ ಬ್ರಹ್ಮಮಯೊಭವೇತ್**
**ತತ್ ಕೃಪಾಂ ಕುರುಮೇಸ್ವಾಮಿನ್ ನಮಾಮಿ ಚರಣೇತವ.**

ತಾತ್ಪರ್ಯ: "ಸ್ವಾಮಿ, ಹೀಗಿರುವಾಗ ಯಾವ ತಪಸ್ಸನ್ನು ಆಚರಿಸಿದರು, ಬ್ರಹ್ಮಾನುಭೂತಿ ಮುಖ್ಯ ಅಲ್ಲವೇ. ಅಂತಹ ಬ್ರಹ್ಮಾನುಭೂತಿಯನ್ನು ಪಡೆಯುವ ಮಾರ್ಗವೇನು? ಆ ಮಾರ್ಗವನ್ನು ನನಗೆ ಉಪದೇಶಿಸಿ. ನಾನು ನಿಮಗೆ ಸಂಪೂರ್ಣವಾಗಿ ಶರಣಾಗತಳಾಗುತ್ತಿದ್ದೇನೆ. ತಮ್ಮನ್ನು ನನ್ನ ಗುರುವಿನಂತೆ ಭಾವಿಸುತ್ತಿದ್ದೇನೆ. ನನ್ನನ್ನು ಅನುಗ್ರಹಿಸಿ ಮಹಾತ್ಮರೆ".

## ಪರಮೇಶ್ವರರು:

**ಶ್ಲೋಕ: ಅಪೂರ್ವ ನಂದತಂ ನಿತ್ಯಂ ಸ್ವಯಂ ಜ್ಯೋತಿರ್ನಿವಾಮಯಂ**
**ವೀರಜಸ್ಕಂ ಪರಂಶಂಭುಂ ಆನಂದಂ ಪರಮ ವ್ಯಯಂ.**

**ತಾತ್ಪರ್ಯ:** ಪರಬ್ರಹ್ಮನನ್ನು ಗುರುತಿಸುವುದು ಸುಲಭತರವಲ್ಲ. ಊಹಿಸಿದಷ್ಟು ಸುಲಭವಲ್ಲ. ಪರಬ್ರಹ್ಮನಿಗೆ ರೂಪ, ಗುಣ ಇಲ್ಲ. ಆದುದರಿಂದ ನಿರ್ದಿಷ್ಟವಾದ ರೂಪ, ನಿರ್ದಿಷ್ಟವಾದ ಗುಣವೆಂದು ಹೇಳಲಾಗದು. ಆದರೆ ಕೆಲವು ಸಂಕೇತಗಳು ಇವೆ. ಅವು ಅನುಭೂತಿಯಿಂದ ತಿಳಿಯುತ್ತದೆ. ಅಪೂರ್ವವಾದ ಆನಂದವನ್ನು ಉಂಟು ಮಾಡುವ ಗುಣ ಪರಬ್ರಹ್ಮನದು. ಆ ಆನಂದವನ್ನು ವ್ಯಕ್ತಪಡಿಸಲು ಸಾಧ್ಯವಾಗದೇ ಇರುವುದರಿಂದ ಅದು ಅವ್ಯಕ್ತಾನಂದ. ಅದನ್ನು ಯೋಗಿ ಮಾತ್ರ ಗ್ರಹಿಸುವ, ಅನುಭವಿಸುವ ಮಧುರಾನಂದ. ಅದು ಆಗಿಂದಾಗ್ಗೆ ಹೊಸದಾಗಿ ಅನಿಸುತ್ತದೆ. ಆದ್ದರಿಂದ ಅದು ನಿತ್ಯ ನೂತನ. ಅದು ದಿವ್ಯ ಪರಿಮಳ ಭರಿತ. ಅದು ಆತ್ಮ ಜ್ಯೋತಿ. ಹೃದಯದಲ್ಲಿ ನೆಮ್ಮದಿಯಿಂದ ಬೆಳಗುತ್ತಿದೆ, ಪ್ರಕಾಶಿಸುತ್ತಿದೆ. ಲೋಕದಲ್ಲಿನ ಯಾವ ಸುಖವಾಗಲಿ, ಸಂತೋಷವಾಗಲಿ ಬ್ರಹ್ಮಾನಂದಕ್ಕೆ ಹೋಲಿಸಲಾಗುವುದಿಲ್ಲ.

**ಶ್ಲೋಕ: ಅಗೋಚರಂ ತಥಾಗಮ್ಯಂ ನಾಮರೂಪಾದಿ ವರ್ಜಿತಂ**
**ನಿಶ್ಯಬ್ದಂ ತಂ ವಿಜಾ ನಿಯಾತ್ ಸ್ವಭಾವಂ ಬ್ರಹ್ಮ ಪಾರ್ವತಿ.**

ತಾತ್ಪರ್ಯ: ಪಾರ್ವತಿ! ಪರಬ್ರಹ್ಮ ಅಗೋಚರ. ಎಲ್ಲಿಯೂ ಕಾಣಿಸುವುದಿಲ್ಲ. ಕಣ್ಣಿಗೆ ಮುದ ನೀಡುವುದಿಲ್ಲ, ಮೇಲಾಗಿ ಅಗಮ್ಯ. ಆಂದರೆ ಈ ಮಾರ್ಗದಲ್ಲಿ ಅನ್ವೇಷಿಸಿದರೆ ಲಭಿಸುತ್ತಾರೆಂದು ಹೇಳಲು ಆಗುವುದಿಲ್ಲ. ಆ ಮಾರ್ಗವು ತಿಳಿಯದು. ಬ್ರಹ್ಮನನ್ನು ತಲುಪಬೇಕೆಂದರೆ ಮಾರ್ಗವೇ ಇಲ್ಲದ ಮಾರ್ಗದಲ್ಲಿ ಪ್ರಯಾಣ ಮಾಡಬೇಕು.

ಆ ಬ್ರಹ್ಮನಿಗೆ ರೂಪವಿಲ್ಲ, ಹೆಸರಿಲ್ಲ. ಅವರನ್ನು ಅನ್ವೇಷಿಸುವವರಿಗೆ ದೇಹ ಸ್ಮೃತಿ ಇರಬಾರದು. ತನ್ನ ಊರು, ಹೆಸರು, ಅಸ್ತಿತ್ವ ಎಲ್ಲವನ್ನು ಮರೆತು ಹೋಗಬೇಕು. ಮತ್ತೊಂದು ಕಣ್ಣಿನಿಂದ ನೋಡಬೇಕು, ಅದೇ ಜ್ಞಾನನೇತ್ರ. ಜ್ಞಾನಿಗೆ ಮಾತ್ರ ತಿಳಿಯುತ್ತದೆ ಆ ಪರಬ್ರಹ್ಮ ತತ್ವ. ಮಾನವರಿಗೆ ಹಾಗೂ ಸಮಸ್ತ ಜೀವ ಜಾತಿಗಳಿಗೆ ಸುಖವನ್ನು ಪ್ರಸಾದಿಸುವುದು, ಜೀವಿಸಲು ಸಹಕರಿಸುವುದು ಆ ಪರಬ್ರಹ್ಮನೆ. ಅವರ ಆವಾಸಸ್ಥಾನ ನಿಶ್ಯಬ್ದ, ಪ್ರಶಾಂತ.

**ಶ್ಲೋಕ: ಯಥಾ ನಿಜ ಸ್ವಭಾವೇನ ಕರ್ಪೂರ ಕುಸುಮಾದಿಷಂ**

**ಶೀತೋಷ್ಣಾದಿ ಸ್ವಭಾವಶ್ಚ ತಥಾ ಬ್ರಹ್ಮಚ ಶಾಶ್ವತಂ**

ಮಾನವರನ್ನು ರೂಪ, ಗುಣ ಸ್ವಭಾವಗಳಿಂದ ಗುರುತಿಸಬಹುದು. ರೂಪ ಪ್ರಪಂಚದಲ್ಲಿ ಚರಾಚರಗಳಿಗೂ ರೂಪವಿರುತ್ತದೆ. ಕೆಲವೊಂದಕ್ಕೆ ಸ್ವಭಾವ ಪ್ರಧಾನ (ಕರ್ಪೂರಕ್ಕೆ ಉಷ್ಣವಾಗಿಸುವ ಗುಣವಿದ್ದಂತೆ, ಹೂವಿಗೆ ತಣ್ಣಗಾಗಿಸುವ ಗುಣ ಇದ್ದಂತೆ) ಪರಬ್ರಹ್ಮನಿಗೆ ಅನಂತತ್ವ ಗುಣವು ಸ್ವಭಾವ. ಆದ್ದರಿಂದ ಶಾಶ್ವತರಾದ ಪರಬ್ರಹ್ಮನನ್ನು ತಾತ್ವಿಕವಾಗಿ ಗುರುತಿಸಬಲ್ಲೆವೆ ಹೊರತು ಇತರೆ ರೂಪನಾಮ ಸ್ವಭಾವಗಳಿಂದ ಮಾತ್ರ ಗುರುತಿಸಲು ಸಾಧ್ಯವಾಗುವುದಿಲ್ಲ.

**ಶ್ಲೋಕ: ಅಂಕಿ ಮತ್ರ ಬಹುನೊಕ್ತೇನ ಶತೇ ನಚ**

**ದುರ್ಲಭಾ ಚಿತ್ತ ವಿಶ್ರಾಂತಿಃ ಸದ್ಗುರೋಃ ಕರುಣಂ ವಿನಾ।**

ನೂರಾರು ಸಾವಿರಾರು ಶಾಸ್ತ್ರಗಳಿವೆ. ಎಷ್ಟೇ ಶಾಸ್ತ್ರಗಳನ್ನು ಓದಿದರು ಎಷ್ಟೇ ಶಾಸ್ತ್ರ ಪಾಂಡಿತ್ಯವನ್ನು ಗಳಿಸಿದರು ಆತ್ಮಕ್ಕೆ ಶಾಂತಿ ಲಭಿಸುವುದಿಲ್ಲ. ಎಷ್ಟೇ ಹುಡುಕಿದರೂ ಶಾಸ್ತ್ರಗಳಲ್ಲಿ ಸರಿಯಾದ ಮುಕ್ತಿ ಮಾರ್ಗವು ಕಾಣಿಸುವುದಿಲ್ಲ.

ಮನಶ್ಶಾಂತಿ ಇಲ್ಲದೆ ಚಿತ್ತ ಚಾಂಚಲ್ಯದಿಂದ ತಳಮಳಗೊಳ್ಳುತ್ತಿರುವವರಿಗೆ ಸದ್ಗುರು ಲಭಿಸಿದಾಗ ಶಾಸ್ತ್ರ ಪಾಂಡಿತ್ಯದಿಂದ ಉಪಯೋಗ ಇರುವುದಿಲ್ಲ. ಸದ್ಗುರುವನ್ನು ಹೊರತುಪಡಿಸಿ ಬ್ರಹ್ಮವಿದ್ಯೆಯನ್ನು ಬೋಧಿಸುವವರು ಯಾರು ಇರಲಾರರು. ಯಾವ ಶಾಸ್ತ್ರವು ಗುರು ಮಾಡುವ ಕೆಲಸವನ್ನು ಮಾಡಲಾಗುವುದಿಲ್ಲ ಎಂದು ಪರಮಶಿವನು ಪರಬ್ರಹ್ಮನ ಹಿರಿಮೆಯನ್ನು, ಅವರನ್ನು ಪಡೆಯುವ ಮಾರ್ಗವನ್ನು ಬೋಧಿಸಿದ್ದಾರೆ.

ಪರಮಶಿವನ ಮೇಲಿನ ಸಂದೇಶದ ಪ್ರಕಾರ ತನ್ನಲ್ಲಿಯೇ ಅಲ್ಲ ಸಕಲ ದೇವತೆಗಳಲ್ಲಿಯು, ಮಾನವರಲ್ಲಿಯೂ, ಸಮಸ್ತ ಜೀವಿಗಳಲ್ಲಿಯೂ ಜ್ಯೋತಿಯಾಗಿ ಬೆಳಗುವ, ಕಾಣಿಸದ ವ್ಯಕ್ತಪಡಿಸಲಾದ ಪರಬ್ರಹ್ಮನನ್ನು ಪರಮೇಶ್ವರನು ನಿತ್ಯವೂ ಧ್ಯಾನಿಸುತ್ತಿದ್ದಾನೆ ಎಂದು ತಿಳಿದುಕೊಳ್ಳಬೇಕು.

ಅಂತಹ ಮಹಾತ್ಮನಾದ ಪರಬ್ರಹ್ಮನನ್ನು ರೂಪದಿಂದ, ನಾಮದಿಂದ, ಗುಣದಿಂದ ತಿಳಿಯಲಾಗುವುದಿಲ್ಲ ಎಂದು ತಿಳಿದುಕೊಳ್ಳಬೇಕು. ಅವರನ್ನು ಈ ಕಣ್ಣುಗಳಿಂದ ನೋಡಲಾರೆವು. ಆ ತತ್ವವನ್ನು ಜ್ಞಾನನೇತ್ರದಿಂದ ಮಾತ್ರ ಗ್ರಹಿಸಬಲ್ಲವೆಂದು ತಿಳಿಯಬೇಕು. ಅಷ್ಟೇ ಅಲ್ಲದೆ ದೇಹ ಸ್ಮೃತಿ ಮರೆತು ಹೋಗಬೇಕೆಂದು ಆ ಪರಮಶಿವನು ಹೇಳುತ್ತಾ... ಅದನ್ನೇ ನಾನು ಸಹ ಮಾಡುತ್ತಿದ್ದೇನೆ, ನೀನು ಸಹ ಅವರನ್ನೇ ಧ್ಯಾನಿಸು ಎಂದು ಪಾರ್ವತಿ ದೇವಿಗೆ ತಿಳಿಸಿದ್ದಾರೆ.

ಇನ್ನು ಮುಂದುವರಿಸುತ್ತಾ ಮಾನವರಾಗಿ ಜನಿಸಿದ ಪ್ರತಿಯೊಬ್ಬರೂ ಸಹ ತಮ್ಮ ಹೃದಯದಲ್ಲಿ ಬೆಳಗುವ ಪುರುಷನನ್ನು ಅಂದರೆ ಆತ್ಮನನ್ನು ಆರಾಧಿಸಬೇಕು. ಅದೇ ಪ್ರತಿಯೊಬ್ಬರ ಮೊದಲನೆಯ ಆಶಯವಾಗಬೇಕು, ಪರಬ್ರಹ್ಮ ದರ್ಶನವೇ ಜೀವನದ ಗುರಿಯಾಗಬೇಕೆಂದು ಪರಮೇಶ್ವರರು ಬೋಧಿಸಿದ್ದಾರೆ.

ಅಂತಹ ಬ್ರಹ್ಮನುಭೂತಿಯನ್ನು ಪಡೆಯಬೇಕೆಂದರೆ ದೇಹ ಸ್ಮೃತಿ ಇರಬಾರದು. ತಮ್ಮ ಊರು, ಹೆಸರು, ಅಸ್ತಿತ್ವವನ್ನು ಮರೆತು ಹೋಗಬೇಕು ಎಂದಿದ್ದಾರೆ. ದೇಹ ಸ್ಮೃತಿ ಎಂದರೆ ದೇಹ ಭಾವನೆ. ಮನಸ್ಸಿನಿಂದ ದೇಹ ಭಾವನೆ ಮೂಡುವುದರಿಂದ

ಮನಸ್ಸನ್ನು ಶೂನ್ಯವಾಗಿಸಬೇಕು. ಆ ಮಾರ್ಗವೇ "ಉಸಿರಾಟದ ಮೇಲೆ ಗಮನ" ಅಂದರೆ 'ಧ್ಯಾನ' ಮಾಡುವುದು.

'ಬ್ರಹ್ಮನು' ಅನಂತ ಶಕ್ತಿ ಸ್ವರೂಪನು ಎನ್ನಲು ಈ ಉದಾಹರಣೆಯನ್ನು ನೋಡೋಣ. ಯಾರಾದರೂ ಮರಣಿಸಿದಾಗ ಅಂದರೆ ಬ್ರಹ್ಮ ಅಂದರೆ ಆತ್ಮ ಶರೀರವನ್ನು ಬಿಟ್ಟು ಹೊರಟು ಹೋದಾಗ ಶರೀರ ಶವವಾಗುತ್ತದೆ. ಆ ಕೂಡಲೇ ಆ ಶವವನ್ನು ಮನೆಯ ಹೊರಗೆ ಮಲಗಿಸುತ್ತಾರೆ.

ವಿಚಿತ್ರವೇನೆಂದರೆ ಆ ಶರೀರ ಅಲ್ಲಿಯವರೆಗೂ ಎಲ್ಲಾ ಕೆಲಸಗಳನ್ನು ಮಾಡಿದೆ. ಕಣ್ಣು ನೋಡಿತು, ಬಾಯಿ ಮಾತನಾಡಿತು, ಕಿವಿಗಳು ಕೇಳಿಸಿಕೊಂಡಿತು, ಕೈ ಕಾಲುಗಳು ಕೆಲಸ ಮಾಡಿತು. ಆದರೆ ಬ್ರಹ್ಮ ಹೊರಬಂದ ಕೂಡಲೇ ಶರೀರಕ್ಕೆ ಏನು ಮಾಡಲು ಸಾಧ್ಯವಾಗಲಿಲ್ಲ. ಆದ್ದರಿಂದಲೇ ಶವ ಎಂದಿದ್ದಾರೆ.

ಸ್ವಲ್ಪ ಆಲೋಚಿಸಿ ಆ ಊರಿನಲ್ಲಿರುವ ಸ್ಪೆಷಲಿಸ್ಟ್, ಡಾಕ್ಟರ್ ಗಳನೆಲ್ಲ ಕರೆಸಿ, ನೀವು ಕೇಳಿದಷ್ಟು ಫೀಸ್ ನೀಡುತ್ತೇವೆ, ಆತ್ಮ ಇಲ್ಲ ಅಂದರೆ ಬ್ರಹ್ಮನಿಲ್ಲದ ಈ ಶರೀರದಿಂದ ಕೆಲಸ ಮಾಡಿಸಿ ಎಂದರೆ ಮಾಡಿಸಬಲ್ಲರೆ? ಕೂಡಲೇ ನಮ್ಮಿಂದ ಆಗುವುದಿಲ್ಲ ಎಂದು ಖಚಿತವಾಗಿ ಹೇಳುತ್ತಾರೆ. ಹೋಗಲಿ ಹೈದರಾಬಾದ್ ನಲ್ಲಿರುವ ಸ್ಪೆಷಲಿಸ್ಟ್ ಡಾಕ್ಟರ್ ಗಳೆಲ್ಲರನ್ನು ಕರೆಸಿ ಅವರ ಲೇಟೆಸ್ಟ್ ತಂತ್ರಜ್ಞಾನದಲ್ಲಿರುವ ಎಕ್ವಿಪ್ಮೆಂಟ್ ಗಳನ್ನು ತರಿಸಿ, ಆ ಶವವನ್ನು ನಡೆಸುವ ಅಗತ್ಯವಿಲ್ಲ, ಕನಿಷ್ಠ ಕೈಯನ್ನು ಅಲುಗಾಡಿಸಬಲ್ಲರೆ ಎಂದಾಗ ಅವರು ನಮ್ಮಿಂದ ಆಗುವುದಿಲ್ಲ ಎಂದು ಅಲ್ಲಿಂದಲೇ ಹೇಳುತ್ತಾರೆ. ಪ್ರಪಂಚದಲ್ಲಿನ ಸ್ಪೆಷಲಿಸ್ಟ್ ಗಳನ್ನು ಸೈಂಟಿಸ್ಟ್ ಗಳನ್ನು ಬುದ್ಧಿಜೀವಿಗಳೆಲ್ಲರನ್ನು ಕರೆತಂದು ಆ ಶವದ ಕೈಯನ್ನು ಕದಲಿಸಿ ಎಂದರೆ ಅದು ನಮ್ಮಿಂದ ಆಗದು ಎಂದು ಹೇಳುತ್ತಾರೆ.

ಇದರ ಅನುಸಾರವಾಗಿ ಪ್ರಪಂಚದಲ್ಲಿನ 700 ಕೋಟಿ ಜನ ಮಾಡಲಾಗದಂತಹ ಕೆಲಸವನ್ನು ಆ ಬ್ರಹ್ಮನೊಬ್ಬನೆ ಮಾಡುತ್ತಿದ್ದಾನೆ. ಅಂದರೆ ಆ ಬ್ರಹ್ಮನ ಶಕ್ತಿ ಎಷ್ಟು ದೊಡ್ಡದು ಎಂದು ಊಹಿಸಬಹುದು. ಇನ್ನು ವಿಚಿತ್ರವೇನೆಂದರೆ ಆ 700 ಕೋಟಿ ಜನ ಮಾಡಲಾಗದ ಕೆಲಸವನ್ನು ಆ ಬ್ರಹ್ಮನೊಬ್ಬನೆ

ಮಾಡಿಸುತ್ತಿದ್ದಾನೆ. ಅವರು ಕೇವಲ ಈ ಮಾನವ ಶರೀರಧಾರಿಗಳಿಂದ ಮಾತ್ರ ಎಲ್ಲಾ ರೀತಿಯ ಕೆಲಸಗಳನ್ನು ಮಾಡಿಸುತ್ತಿದ್ದಾರೆ ಎಂದಲ್ಲ. 700 ಕೋಟಿಗಿಂತ ಹೆಚ್ಚಾಗಿರುವ ಈ ಎಲ್ಲಾ ಮಾನವರಿಂದ ಮಾತ್ರವಲ್ಲದೆ ಈ ಸೃಷ್ಟಿಯಲ್ಲಿನ 84 ಲಕ್ಷ ಜೀವ ರಾಶಿಗಳಿಂದಲೂ ಸಹ ಈ ಕೆಲಸಗಳನ್ನು ಮಾಡಿಸುತ್ತಿದ್ದಾರೆ.

ಸ್ವಲ್ಪ ಆಲೋಚಿಸಿ, ಒಂದೊಂದು ಜೀವರಾಶಿಯಲ್ಲಿ ಎಷ್ಟು ಕೋಟಿ ಜೀವಿಗಳು ಇವೆ ಎಂದು, ಎಷ್ಟು ಕೋಟ್ಯಾಂತರ ಜೀವಿಗಳ, ಜೀವ ರಾಶಿಗಳ ಬದುಕಿಗೆ ಕಾರಣ ಆ ಪರಬ್ರಹ್ಮ ಒಬ್ಬನೇ ಎಂದಾಗ ಆತನ ಶಕ್ತಿ ಅನಂತ ಅಲ್ಲವೇ! ಆದ್ದರಿಂದಲೇ ಅವರನ್ನು 'ಅನಂತಶಕ್ತಿ ಸ್ವರೂಪನು' ಎಂದಿದ್ದಾರೆ.

'ಪರಬ್ರಹ್ಮನಿ'ಗೆ ಇರುವ ಶಕ್ತಿ ಮಾನವರಿಗೂ ಇಲ್ಲ, ದೇವತೆಗಳಿಗೂ ಇಲ್ಲವೆಂದು ಹೇಳಬೇಕು. ಈ ವಿಷಯವನ್ನು ಉಪನಿಷತ್ ನಲ್ಲಿನ ಈ ಕೆಳಗಿನ ಕಥೆಯ ಮೂಲಕ ನಾವು ಸ್ಪಷ್ಟವಾಗಿ ತಿಳಿಯಬಹುದು.

ಕೇನೋಪನಿಷತ್ ನಲ್ಲಿ ಬ್ರಹ್ಮನ ಹಿರಿಮೆಯನ್ನು ತಿಳಿಸುವ ಕಥೆಯನ್ನು ತಿಳಿಯೋಣ:

ಪೂರ್ವ ಕಾಲದಲ್ಲಿ ರಾಕ್ಷಸರಿಗೂ, ದೇವತೆಗಳಿಗೂ ಭಯಾನಕ ಯುದ್ಧವಾಯಿತು. ಕೊನೆಗೆ ಯುದ್ಧದಲ್ಲಿ ದೇವತೆಗಳು ಜಯಶಾಲಿಗಳಾದರು. ಯಶಸ್ಸು ಲಭಿಸಿದ ಕಾರಣ



ದೇವತೆಗಳಿಗೆ ಗರ್ವವು ಮಿತಿಮೀರಿ... ನಾವು ಯುದ್ಧ ಮಾಡಿದುದರಿಂದ ರಾಕ್ಷಸರನ್ನು ಸೋಲಿಸಲು ಸಾಧ್ಯವಾಯಿತು. ನಾವೇ ಈ ವಿಜಯವನ್ನು ಸಾಧಿಸಿರುವುದು ಎಂಬ ಅಹಂಕಾರದಿಂದ, ಲೋಕದಲ್ಲಿ ನಮಗಿಂತ ಸಮರ್ಥರು ಯಾರು ಇಲ್ಲವೆಂದು ಭಾವಿಸಿದರು.

ಆ 'ಪರಬ್ರಹ್ಮ', ದೇವತೆಗಳ ಉದ್ದೇಶ ವನ್ನು ಗಮನಿಸಿದರು. ಈ ರೀತಿ ಗರ್ವದಿಂದ ವರ್ತಿಸಿದರೆ ಹಾಳಾಗುತ್ತಾರೆಂಬ ಉದ್ದೇಶದಿಂದ, ದೇವತೆಗಳಿಗೆ ಗುಣಪಾಠವನ್ನು ಕಲಿಸಬೇಕೆಂದು ತೀರ್ಮಾನಿಸಿದರು.

ಒಂದು ದಿನ ಇಂದ್ರಸಭೆ ನಡೆಯುತ್ತಿರುವಾಗ... ಆ ಪರಬ್ರಹ್ಮ ಅತಿ ಪ್ರಕಾಶದಿಂದ ಕಂಗೊಳಿಸುತ್ತಿರುವ ಯಕ್ಷನ ರೂಪದಲ್ಲಿ ದೇವತೆಗಳಿಗಿಂತ ಸ್ವಲ್ಪ ದೂರದಲ್ಲಿ ಪ್ರತ್ಯಕ್ಷರಾದರು. ಮಹಾ ತೇಜಸ್ವಿಯಾಗಿರುವ ಆ ಯಕ್ಷನ ಸ್ವರೂಪವನ್ನು ನೋಡಿ ದೇವತೆಗಳೆಲ್ಲರೂ ಆಶ್ಚರ್ಯಚಕಿತರಾದರು. ಅವರು ಯಾರೆಂದು? ಯಾರಿಗೂ ಅರ್ಥವಾಗಲಿಲ್ಲ. ಆಗ ಅವರೆಲ್ಲರೂ ಅಗ್ನಿಯನ್ನು, ಬಂದಿರುವವರು ಯಾರೆಂದು ತಿಳಿದುಕೊಂಡು ಬರುವಂತೆ ಕಳುಹಿಸಿದರು.

ಆಗ, ಅಗ್ನಿ ಆ ಯಕ್ಷನ ಬಳಿ ಹೋದರು. ಆಗ ಯಕ್ಷ ಅಗ್ನಿಯನ್ನು, ನೀನು ಯಾರು ಎಂದು ಪ್ರಶ್ನಿಸಿದರೂ?

ಆಗ ಅವರು ನಾನು ಅಗ್ನಿದೇವರು. ಲೋಕದಲ್ಲಿ ಬಹಳ ಖ್ಯಾತಿಯನ್ನು ಹೊಂದಿರುವವನು ಎಂದು ಉತ್ತರವನ್ನು ನೀಡಿದರು.

ಅಷ್ಟು ಖ್ಯಾತಿಯನ್ನು ಹೊಂದಿರುವವರಾದರೆ ನಿಮ್ಮ ಶಕ್ತಿ ಸಾಮರ್ಥ್ಯಗಳು ಏನು? ಎಂದು ಯಕ್ಷ ಪ್ರಶ್ನಿಸಿದರು.

ತೇಜಸ್ವಿ, ನನ್ನ ಪರಾಕ್ರಮ ನಿಮಗೆ ತಿಳಿಯದೆ. ಭೂಮಿಯ ಮೇಲೆ ಏನನ್ನಾದರೂ ಸರಿ ನಾನು ಭಸ್ಮವಾಗಿಸಬಲ್ಲೆ ಎಂದು ಗರ್ವದಿಂದ ಉತ್ತರವನ್ನು ನೀಡಿದರು.

ಅದನ್ನು ಕೇಳಿದ ಯಕ್ಷ, ಅಗ್ನಿಯ ಮುಂದೆ ಒಂದು ಹುಲ್ಲನ್ನು ಹಾಕಿ, ಹಾಗಿದ್ದರೆ ಈ ಹುಲ್ಲನ್ನು ಭಸ್ಮವಾಗಿಸು ಎಂದರು. ಆಗ ಅಗ್ನಿ ತಮ್ಮ ಶಕ್ತಿಯನ್ನೆಲ್ಲಾ ಉಪಯೋಗಿಸಿದರು ಸಹ ಆ ಹುಲ್ಲನ್ನು ಏನು ಮಾಡಲು ಆಗಲಿಲ್ಲ. ನಾಚಿಕೆಯಿಂದ ತಲೆತಗ್ಗಿಸಿಕೊಂಡು ಹಿಂದಿರುಗಿದರು.

ಆಗ ದೇವತೆಗಳೆಲ್ಲರೂ, ವಾಯುದೇವರನ್ನು ಕಳುಹಿಸಿದರು. ವಾಯು ಯಕ್ಷರನ್ನು ಸಮೀಪಿಸಿದ ಕೂಡಲೇ, ಯಕ್ಷರು ನೀನು ಯಾರು? ನಿನ್ನಲ್ಲಿನ ಸಾಮರ್ಥ್ಯವೇನು ಎಂದು

ಪ್ರಶ್ನಿಸಿದರು? ಈ ಭೂಮಿಯ ಮೇಲಿರುವ ಎಲ್ಲವನ್ನು ಹಾರುವಂತೆ ಮಾಡಬಲ್ಲೆ. ಒಂದು ಕ್ಷಣದಲ್ಲಿ ಈ ಬ್ರಹ್ಮಾಂಡವನ್ನೇ ಅಲುಗಾಡಿಸಬಲ್ಲೆ, ಒಂದು ಕ್ಷಣದಲ್ಲಿ ಭೂಮಿ ಆಕಾಶವನ್ನು ಒಂದು ಮಾಡಬಲ್ಲೆ ಎಂದು ವಾಯು ಉತ್ತರಿಸಿದರು.

ಹಾಗಿದ್ದರೆ, ಈ ಹುಲ್ಲನ್ನು ಹಾರಿಸು ಎಂದು ವಾಯುವಿನ ಮುಂದೆ ಹುಲ್ಲನ್ನು ಇಟ್ಟರು. ವಾಯು ಆ ಹುಲ್ಲನ್ನು ಹಾರಿಸಲು ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿದರು ಏನು ಮಾಡಲು ಆಗಲಿಲ್ಲ. ಆಗ ವಾಯು ಸಹ ಹಿಂದಿರುಗಿದರು.

ಆಗ ದೇವತೆಗಳೆಲ್ಲರೂ ಒಟ್ಟುಗೂಡಿ, ತಮ್ಮ ರಾಜನಾದ ಇಂದ್ರನನ್ನು ಆ ಕೆಲಸಕ್ಕೆ ಹುರಿದುಂಬಿಸಿದರು. ಆಗ ಇಂದ್ರನು ಸರಿ ಎಂದು, ಆ ಯಕ್ಷನ ಬಳಿ ಸಮೀಪಿಸುತ್ತಿದ್ದಂತೆ, ಯಕ್ಷನು ಅಂತರ್ಧಾನವಾದರೂ. ಆಗ ಇಂದ್ರನು ಅಚ್ಚರಿಯಿಂದ ಅತ್ತಿತ್ತ ನೋಡುತ್ತಿರುವಾಗ, ಅವರಿಗೆ ಪಾರ್ವತಿ ದೇವಿ ಪ್ರತ್ಯಕ್ಷವಾದರು ಆಗ ಇಂದ್ರನು ಆಕೆಗೆ ನಮಸ್ಕರಿಸಿ, ದೇವಿ ದೇವತೆಗಳೆಲ್ಲರನ್ನು ಭಯಕ್ಕೀಡು ಮಾಡಿದವರು ಯಾರು ಎಂದು ಕೇಳಿದರು?

ಅವರೇ, ಪರಬ್ರಹ್ಮ ಎಂದು ಪಾರ್ವತಿ ದೇವಿ ಉತ್ತರವನ್ನು ನೀಡಿದರು. ಎಲ್ಲದರಲ್ಲಿಯೂ ಅಂತರ್ಲೀನವಾಗಿರುವ ಆ ಪರಬ್ರಹ್ಮನೆ ನಿಮ್ಮ ಯಶಸ್ಸಿಗೆ ಕಾರಣ. ಆ ಬ್ರಹ್ಮನಿಂದಲೇ ನೀವು ಯುದ್ಧದಲ್ಲಿ ರಾಕ್ಷಸರನ್ನು ಜಯಸಲು ಸಾಧ್ಯವಾಯಿತು. ಈ ನಿಜವನ್ನು ಅರಿಯದೆ ನಾವೇ ನಮ್ಮ ಬಲ ಪರಾಕ್ರಮಗಳಿಂದ ರಾಕ್ಷಸರನ್ನು ಗೆದ್ದೆವು ಎಂದು ಗರ್ವದಿಂದ ವರ್ತಿಸುತ್ತಿದ್ದೀರಿ. ನಿಮ್ಮ ಅಹಂಕಾರವನ್ನು ತೊಲಗಿಸಲೆಂದೇ ಆ ಬ್ರಹ್ಮನು ತನ್ನ ಮಾಯ ಶಕ್ತಿಯನ್ನು ನಿಮ್ಮ ಮುಂದೆ ಪ್ರದರ್ಶಿಸಿದರು. ಆದರೆ ಅವರ ಸಹಾಯ ಸಹಕಾರವಿಲ್ಲದೆ ನೀವು ಕೇವಲ ಒಂದು ಹುಲ್ಲನ್ನು ಸಹ ಕದಲಿಸಲು ಸಾಧ್ಯವಾಗಲಿಲ್ಲ. ಆದುದರಿಂದ, ನಿಮ್ಮಲ್ಲಿ ಯಾವುದಾದರೂ ಶಕ್ತಿಯಿದೆ ಎಂದರೆ ಅದು ಆ ಪರಬ್ರಹ್ಮನ ಶಕ್ತಿ ಎಂಬ ವಿಷಯವನ್ನು ತಿಳಿಯಿರಿ. ಗರ್ವವು ಸರಿಯಲ್ಲ ಎಂದು ಹೇಳಿ ಪಾರ್ವತಿ ದೇವಿ ಅಂತರ್ಧಾನವಾದರು.

ಆಗ, ಆ ಶಕ್ತಿ ಸ್ವರೂಪ, ಬ್ರಹ್ಮಸ್ವರೂಪವೆಂದು ಇಂದ್ರನು ತಿಳಿದುಕೊಂಡನು. ಇಂದ್ರನಿಂದ ಉಳಿದ ದೇವತೆಗಳು ಸಹ ಈ ಸತ್ಯವನ್ನು ತಿಳಿದರು.

ಮೇಲಿನ ಕಥೆಯಾನುಸಾರವಾಗಿ ದೇವತೆಗಳು ಪ್ರದರ್ಶಿಸುತ್ತಿರುವ ಶಕ್ತಿ ಅವರದ್ದಲ್ಲ. ಅವರ ಶಕ್ತಿ ಎಲ್ಲವೂ ಬ್ರಹ್ಮನದೆ ಎಂದು ಅರ್ಥ ಮಾಡಿಕೊಳ್ಳಬೇಕು. ಬ್ರಹ್ಮನ ಶಕ್ತಿಯಿಂದಲೇ ಅವರು ತಮ್ಮ ಬಲವನ್ನು ಪ್ರದರ್ಶಿಸುತ್ತಿದ್ದಾರೆ. ರಾಕ್ಷಸರನ್ನು ಸೋಲಿಸುತ್ತಿದ್ದಾರೆ. ಬ್ರಹ್ಮನ ಶಕ್ತಿ ಇಲ್ಲದೆ ಹೋದರೆ ಹುಲ್ಲನ್ನು ಸಹ ಕದಲಿಸಲು ಸಾಧ್ಯವಾಗಲಿಲ್ಲ, ಅಂದರೆ ಅವರು ಅಷ್ಟು ಶಕ್ತಿಹೀನರಾದರು ಅಲ್ಲವೇ.

ಅಷ್ಟೇಕೆ, ಮಾನವರಲ್ಲಿ ಗಮನಿಸಿ ನಾನು ಇಂಥವನು, ಅಂಥವನು, ನಾನಂದುಕೊಂಡರೆ ಏನಾದರೂ ಮಾಡಬಲ್ಲೆ, ಅವನೆಷ್ಟು, ಇವನೆಷ್ಟು, ನನಗೆ ಅಷ್ಟು ಖ್ಯಾತಿ ಇದೆ. ಪದವಿಗಳಿವೆ. ಇವರೆಲ್ಲಾ ನನ್ನ ಹಿಂದೆ, ನಾನು ಅಂದುಕೊಂಡರೆ ಅವರನ್ನು ನಿಮಿಷದಲ್ಲಿ ಮುಗಿಸಬಲ್ಲೆ, ನಾನು ಅದನ್ನು ಸಾಧಿಸಿದ್ದೇನೆ, ಇದನ್ನು ಸಾಧಿಸಿದ್ದೇನೆ ಎಂದು ಹೊಗಳಿಕೊಳ್ಳುವವರು ಬಹಳ ಜನರಿದ್ದಾರೆ.

ಸ್ವಲ್ಪ ಯೋಚಿಸಿ, ಆ ರೀತಿ ಹೊಗಳಿ ಕೊಂಡವರೆಲ್ಲರಿಗು, ರಾತ್ರಿ ಏನಾದರೂ ಎದೆ ನೋವು ಕಾಣಿಸಿಕೊಂಡು, ಆತ್ಮ ಹೊರ ಬಂದರೆ, ಏನಾಗುತ್ತದೆ? ಅವರು ಶವವಾಗುತ್ತಾರೆ. ಕೂಡಲೇ ಅವರನ್ನು ಮನೆಯ ಹೊರಗೆ ಮಲಗಿಸುತ್ತಾರೆ. ಆಗ ಅವರನ್ನು ಕೇಳಿ, ನಿನ್ನೆ ಅವರನ್ನು ಸಾಯಿಸುತ್ತೇನೆ ಎಂದೆ, ಈಗ ಒಮ್ಮೆ ಎದ್ದು ಆತನ ವಿಷಯವನ್ನು ನೋಡು ಎಂದರೆ, ಅವನು ಏಳುತ್ತಾನೆಯೇ? ಕದಲುತ್ತಾನೆಯೇ? ಏನಾದರೂ ಮಾಡಬಲ್ಲನೆ? ಏನು ಮಾಡಲು ಸಾಧ್ಯವಿಲ್ಲ. ಕೊನೆಗೆ ಹುಲ್ಲನ್ನು ಆತನ ಪಕ್ಕದಲ್ಲಿಟ್ಟರು, ಅದನ್ನು ಸಹ ಕದಲಿಸಲಾಗುವುದಿಲ್ಲ. ಹಾಗಿದ್ದರೆ ನಿನ್ನೆ ನುಡಿದ ಹೊಗಳಿಕೆಯ ಮಾತುಗಳು ಏನಾಯ್ತು? ಈಗ ಏಕೆ ಏನನ್ನು ಮಾಡಲು ಆಗುತ್ತಿಲ್ಲ.

ಅಂದರೆ ನಿನ್ನೆ ಬ್ರಹ್ಮ ಅಂದರೆ ಆತ್ಮವಿತ್ತು. ಇಂದು ಬ್ರಹ್ಮ ನಿಷ್ಕ್ರಮಿಸಿದನು. ಅಂದರೆ ಆತ್ಮ ಹೊರಟು ಹೋಯಿತು. ಅಂದರೆ ಅವನ ಶಕ್ತಿಯೆಲ್ಲವೂ ಸಹ ಬ್ರಹ್ಮನ ಶಕ್ತಿಯೇ ಹೊರತು ಅವನದಲ್ಲ ಎಂದು ಅರ್ಥವಾಯಿತು. ಬ್ರಹ್ಮ ಇರುವುದರಿಂದಲೇ ಅವನು ನಾಯಕನಂತೆ ವರ್ತಿಸಿದನು. ಆದರೆ ಬ್ರಹ್ಮ ಇಲ್ಲದ ಕಾರಣ ಅವನು ಜೀರೋ ಆದನು. ಆದ್ದರಿಂದ ತಿಳಿದುಕೊಳ್ಳಿ, ಯಾರ ಹೀರೋಯಿಸಂ ಆದರೂ ಸರಿ ಅದು ಅವರದ್ದಲ್ಲ. ಅದು ಬ್ರಹ್ಮನದು. ಬ್ರಹ್ಮ ಇಲ್ಲದಿದ್ದರೆ ಎಲ್ಲರೂ ಜೀರೋಗಳೇ.

ನಾವು ಸ್ವಲ್ಪ ಗಮನಿಸಿದಾಗ, ಲೋಕದಲ್ಲಿ ಬಹಳಷ್ಟು ಜನ ಬಹಳ ಹಿರಿಮೆಗಳನ್ನು ಹೊಗಳಿಕೊಳ್ಳುತ್ತಿರುತ್ತಾರೆ. ಗರ್ವದಿಂದ ವರ್ತಿಸುತ್ತಿರುತ್ತಾರೆ, ಅಹಂಕಾರದಿಂದ

ಬೀಗುತ್ತಿರುತ್ತಾರೆ. ನಾನು ನನ್ನ ಕಷ್ಟದಿಂದ ಬಹಳ ಹಣವನ್ನು ಸಂಪಾದಿಸಿದ್ದೇನೆ ಎಂದು, ಕೆಲವು ಜನ ನನ್ನ ಬುದ್ಧಿವಂತಿಕೆಯಿಂದ ಈ ಪದವಿಗಳನ್ನು ಸಾಧಿಸಿದ್ದೇನೆ. ಇನ್ನೂ ಕೆಲವು ಜನ ಇಷ್ಟು ದೊಡ್ಡ ಉದ್ಯೋಗವನ್ನು ಮಾಡುತ್ತಿದ್ದೇನೆ, ನಾನು ಬಹಳ ಚೆನ್ನಾಗಿ ಹಾಡುತ್ತಿದ್ದೇನೆ, ಆಟಗಳನ್ನು ಆಡುತ್ತಿದ್ದೇನೆ, ನಟಿಸುತ್ತಿದ್ದೇನೆ, ಇಷ್ಟು ಮೇಲೆ ಬರಲು ನನ್ನಿಂದ ಸಾಧ್ಯವಾಯಿತು ಎಂದು ಗರ್ವಿಸುವವರು ಬಹಳ ಜನರಿದ್ದಾರೆ. ದೇವರಂತೆ ತಮ್ಮ ಹಿರಿಮೆಗಳನ್ನು ಹೇಳಿಕೊಳ್ಳುವವರು ಬಹಳ ಜನರಿದ್ದಾರೆ. ಆದರೆ ಇರುವ ಸತ್ಯವೇನೆಂದರೆ ಅವರ ಹಿರಿಮೆಗೆ ಕಾರಣ ಅವರಲ್ಲ, ಪರಬ್ರಹ್ಮ. ಪರಬ್ರಹ್ಮನಿಲ್ಲದೆ ಇದ್ದರೆ ಅವರು ಏನು ಮಾಡಲು ಸಾಧ್ಯವಿಲ್ಲ. ಹೀರೋಗಳೆಂದು ಭಾವಿಸುವವರೆಲ್ಲರೂ ಸಹ ಜೀರೋಗಳಾಗುತ್ತಾರೆ.

ಆದುದರಿಂದ ಇರುವುದನ್ನು ನೋಡುತ್ತಾ ಸುಮ್ಮನೆ ಮೇಲೆ ಮೇಲೆ ಎಗರಬೇಡಿ. ಗರ್ವಿಸದಿರಿ. ಅಹಂಕಾರ ಬೇಡ. ಇಲ್ಲಿ ನಾನು ಎಂಬುದು ಇಲ್ಲವೇ ಇಲ್ಲ. ಇರುವುದೆಲ್ಲಾ ಅವರೇ, ಅಂದರೆ ಬ್ರಹ್ಮ. ಬ್ರಹ್ಮನನ್ನು ಹೊರತುಪಡಿಸಿ ಮತ್ತೊಂದನ್ನು ಊಹಿಸಲು ಇನ್ನೊಂದು ಇದೆಯೇ? ಇಲ್ಲ. ಇರುವುದು ಅವರೊಬ್ಬರೇ.



ಈ ವಿಷಯವನ್ನೇ 'ಈಶಾವಾಸ್ಯೋಪನಿಷತ್' ನಲ್ಲಿ ಈ ಶ್ಲೋಕದ ಮೂಲಕ ತಿಳಿಸಿದ್ದಾರೆ.

**ಈಶಾವಾಸ್ಯಮಿದಂ ಸರ್ವಂ, ಯತ್ಕಿಂಚಜಗತ್ಯಾಂ ಜಗತ್।**
**ತೇನತ್ಯಕ್ತೇನ ಭುಂಜೀಥಾ ಮೌಗೃಥಃ ಕಸ್ಯ ಸ್ವಿದ್ದನಮ್॥**

**ತಾತ್ಪರ್ಯ:** ಈ ಸಮಸ್ತ ಸೃಷ್ಟಿಯಲ್ಲಿ ಯಾವ ಚರಾಚರ ವಸ್ತು ಜಾಲವಿದೆಯೊ, ಅವೆಲ್ಲವೂ ಸಹ ಸರ್ವೈಶ್ವರ್ಯ ಸಂಪನ್ನನಾದ ಬ್ರಹ್ಮ ಅಂದರೆ ಭಗವಂತನಿಂದ ವ್ಯಾಪಕವಾಗಿರುವುದು. ಆದ್ದರಿಂದ ತ್ಯಾಗ ಭಾವನೆಯಿಂದ ಈಶ್ವರಮಯವಾದ ಈ ಪ್ರಪಂಚವನ್ನು ಅನುಭವಿಸಿ. ಯಾರ ಧನವನ್ನು ಆಶಿಸದಿರಿ, ಯಾರದ್ದನ್ನು ಅಪಹರಿಸದಿರಿ.

ಅಂದರೆ ಈ ಪ್ರಪಂಚದಲ್ಲಿರುವ ಸಮಸ್ತ ಚರಾಚರಗಳೆಲ್ಲವು ಸಹ ಈಶ್ವರನೇ ಎಂಬ ದೃಷ್ಟಿಯಿಂದ ನೋಡಿ.

ಅಷ್ಟೇ ಅಲ್ಲದೇ, ಆ ಬ್ರಹ್ಮ ಸ್ವರೂಪವನ್ನು ಅರಿಯಲು ಈ ಉಪನಿಷತ್ ನಲ್ಲಿ ಈ ರೀತಿ ತಿಳಿಸಲಾಗಿದೆ:

ಬ್ರಹ್ಮ ಎಂದರೆ ಆತ್ಮ. ಚಲನರಹಿತವಾದ ಮನಸ್ಸಿಗಿಂತ ವೇಗಯುತವಾದದ್ದು. ಇಂದ್ರಿಯಗಳು ಇದನ್ನು ಗ್ರಹಿಸಲು ಸಾಧ್ಯವಿಲ್ಲ. ಏಕೆಂದರೆ ಮನಸ್ಸು ಎಲ್ಲಿಗೆ ಹೋಗುತ್ತದೆಯೋ ಅದಕ್ಕಿಂತ ಮುಂಚೆ ಆತ್ಮ ಅಲ್ಲಿರುತ್ತದೆ. ಈ ಆತ್ಮ ಮನದಲ್ಲಿ ಓಡುತ್ತಿರುವ ಇತರೆ ವಿಷಯ ವಿಕಾರಗಳನ್ನು ದಾಟಿ ಹೋಗುತ್ತದೆ. ಆತ್ಮ ಎಂದರೆ ಬ್ರಹ್ಮ. ತನ್ನ ಇರುವಿಕೆಯಿಂದ ಪ್ರಾಣಿಕೋಟಿಯ ನಿತ್ಯ ಜೀವನದ ಕಾರ್ಯಕಲಾಪಗಳನ್ನು ನಡೆಸಲು ಬೇಕಾಗುವ ಪ್ರಾಣಶಕ್ತಿಯನ್ನು ಕಾರ್ಯೋನ್ಮುಖ ಗೊಳಿಸುತ್ತದೆ.

ಆತ್ಮ ಚಲಿಸುತ್ತದೆ. ತನ್ನ ನಿಜವಾದ ಕೇವಲ ಸ್ಥಿತಿಯಲ್ಲಿ ಚಲಿಸುವುದಿಲ್ಲ. ಅಜ್ಞಾನಿಗಳಿಗೆ ದೂರದಲ್ಲಿ, ಪ್ರಜ್ಞಾನಿಗಳಿಗೆ ಅತಿ ಸಮೀಪದಲ್ಲಿದೆ. ಅದು ಒಳಗು, ಹೊರಗು, ಎಲ್ಲಾ ಕಡೆ ವ್ಯಾಪಿಸಿದೆ.

ಬ್ರಹ್ಮ ಎಂದರೆ ಆತ್ಮ. ಸರ್ವ ವ್ಯಾಪಕ ತೇಜೋಮಯ. ಅದಕ್ಕೆ ಶರೀರವಿಲ್ಲ. ಬ್ರಹ್ಮ ಸರ್ವದ್ರಷ್ಟ, ಸರ್ವಜ್ಞ, ಸರ್ವೋತ್ಕೃಷ್ಟ... ಅಂದರೆ ಎಲ್ಲಕ್ಕಿಂತ ಮೇಲೆ ಇರುವವನು, ಸ್ವಯಂಭು ಅಂದರೆ ಸ್ವತಃ ಸಿದ್ಧನು ಎಂದು.

ಇನ್ನು ಅರಿಯಬೇಕೆಂದರೆ ನಿದ್ರಿಸಿರುವ ಎಲ್ಲಾ ಜೀವಿಗಳಲ್ಲಿಯೂ ಯಾವ ಪುರುಷನು ಜಾಗೃತವಾಗಿ ಇದ್ದಾನೋ, ಅದೇ ನಾಶರಹಿತವಾದ ಪರಿಶುದ್ಧವಾದ ಬ್ರಹ್ಮ. ಆ ಪರಮಾತ್ಮನಲ್ಲಿಯೇ ಸಮಸ್ತ ಲೋಕಗಳು ಆಶ್ರಯಿಸಿವೆ. ಜನ್ಮ, ವೃದ್ಧಿ, ಪರಿಣಿತಿ, ಪ್ರಕ್ಷಯ, ವ್ಯಾಧಿ, ನಾಶನದಂತಹ ಆರು ವಿಕಾರಗಳು ಇಲ್ಲದೆ ಇರುವವನು ಬ್ರಹ್ಮ.

ಆದ್ದರಿಂದಲೇ ಎಲ್ಲವೂ ಅವರೇ, ಅವರೇ ಎಲ್ಲಾ ಎನ್ನುತ್ತಾರೆ. ಎಲ್ಲದರಲ್ಲಿಯೂ ಅವರೇ, ಎಲ್ಲಾ ಅವರೇ ಆಗಿರುವಾಗ ಇಲ್ಲಿ ನಾನು ಎಂದು ಭಾವಿಸುವುದೇ ವಿಚಿತ್ರ ಎಲ್ಲರೂ,ಇಲ್ಲದೆ ಇರುವುದನ್ನು ಇದೆ ಎಂದು ಭಾವಿಸುತ್ತಾರೆ. ಇದನ್ನು ಮಾಯೆ ಎಂದು ಕರೆಯುತ್ತಾರೆ. ಅಂದರೆ ಎಲ್ಲರೂ ಮಾಯೆಯಲ್ಲಿ ಇದ್ದಾರೆಂದು ಅರ್ಥ.

ನಾವು ಸ್ವಲ್ಪ ಯೋಚಿಸಿದಾಗ ಇದೆಲ್ಲವೂ ಬಹಳ ವಿಚಿತ್ರದಂತೆ ಕಾಣಿಸುತ್ತದೆ. ಇಲ್ಲದೇ ಇರುವುದು ಏನು? ಎಲ್ಲರೂ ಇದ್ದಾರಲ್ಲವೇ, ಎಲ್ಲವೂ ಇದೆ ಅಲ್ಲವೇ, ಇಲ್ಲದಿರುವುದು ಏನು ಎಲ್ಲವೂ ಗೊಂದಲ. ಅರ್ಥವಾಗುವುದಿಲ್ಲ. ಆದರೆ ಬ್ರಹ್ಮಜ್ಞಾನವನ್ನು ಪಡೆದವರಿಗೆ ಎಲ್ಲವೂ ತಾವೇ , ಎಲ್ಲದರಲ್ಲಿಯೂ ತಾವೇ ತಮ್ಮನ್ನು ಹೊರತುಪಡಿಸಿ ಬೇರೆ ಏನೂ ಇಲ್ಲವೆಂದು ತಿಳಿಯುತ್ತದೆ.

ಆದುದರಿಂದಲೇ ವೇದಗಳಲ್ಲಿ 'ಸರ್ವಂ ಖಲ್ವಿದಂ ಬ್ರಹ್ಮ' ಎಂದಿದ್ದಾರೆ. ಅಂದರೆ ಸಮಸ್ತವೂ ಬ್ರಹ್ಮಮಯವೆಂದು ಅರ್ಥ. ಇದನ್ನು ಸ್ವಲ್ಪ ತಿಳಿಯೋಣ:

ನಮಗೆ ಈ ಸೃಷ್ಟಿಯಲ್ಲಿ ಕೋಟ್ಯಾಂತರ ಲೋಕಗಳು, ವಿಶ್ವಗಳು, ಗ್ರಹಗಳು ಇವೆ ಎಂಬುದು ತಿಳಿದಿದೆ. ಈ ಲೋಕಗಳಲ್ಲಿ ಕೆಲವು ಭೌತಿಕ ಲೋಕಗಳು ಅಂದರೆ ಕಣ್ಣಿಗೆ ಕಾಣಿಸುವಂತಹುದು, ಕೆಲವು ಸೂಕ್ಷ್ಮ ಲೋಕಗಳು ಅಂದರೆ ಕಣ್ಣಿಗೆ ಕಾಣಿಸದೆ ಇರುವುದು ಇದೆ. ಕೋಟಿಗಟ್ಟಲೆ ಕಣ್ಣಿಗೆ ಕಾಣಿಸುವ ಲೋಕಗಳು ಇದೆ ಎನ್ನುತ್ತಾರೆ. ಹಲವಾರು ಭೂಮಂಡಲಗಳು, ಸೂರ್ಯ ಗೋಳಗಳು, ನಕ್ಷತ್ರಗಳು,

ವಿಶ್ವಗಳು ಇದೆ ಎನ್ನುತ್ತಾರೆ. ಈ ನಡುವೆಯೇ ಶಾಸ್ತ್ರಜ್ಞರು ಹೊಸದಾಗಿ ಭೂಗ್ರಹದಂತಹ ಏಳು ಗ್ರಹಗಳನ್ನು ಗುರುತಿಸಿದ್ದಾರೆ. ಇದರಿಂದ ನಾವು ಬಹಳ ಸುಲಭವಾಗಿ ಊಹಿಸಬಹುದು. ಆದರೆ, ನಾವು ಗುರುತಿಸದ ಕಾರಣ ಅವು ಇಲ್ಲ ಎಂದು ಭಾವಿಸಬಾರದು. ಈ ಗ್ರಹಗಳಲ್ಲಿ ಕೋಟ್ಯಾಂತರ ಜೀವಿಗಳು, ಜೀವ ರಾಶಿಗಳು ಇದೆ. 84 ಲಕ್ಷ ಜೀವರಾಶಿಗಳಿವೆ ಎನ್ನುತ್ತಾರೆ. ಒಂದೇ ಜಾತಿಯಲ್ಲಿಯೇ ಕೋಟ್ಯಾಂತರ ಜೀವರಾಶಿಗಳು ಇದೆ ಎನ್ನುತ್ತಾರೆ. ಪ್ರಸ್ತುತ ಭೂಮಿಯ ಮೇಲೆ ಮಾನವ ಜನಾಂಗವು 700 ಕೋಟಿಗಿಂತ ಹೆಚ್ಚಾಗಿದೆ ಎಂಬುದು ನಮಗೆ ಗೊತ್ತು.

ಅಷ್ಟೇ ಅಲ್ಲದೆ ಭೂಮಿಯ ಮೇಲೆ ಶರೀರವನ್ನು ತ್ಯಜಿಸಿದವರು ಶರೀರವನ್ನು ಪಡೆಯಲು ಸಿದ್ಧವಾಗಿ ಇರುವವರು ಮೇಲಿನ ಲೋಕಗಳಲ್ಲಿ ಕೋಟ್ಯಾಂತರ ಜನರಿದ್ದಾರೆ ಎಂಬುದನ್ನು ನಾವು ಊಹಿಸಲು ಸಾಧ್ಯವಿಲ್ಲ. ಇನ್ನು ಸೂಕ್ಷ್ಮವಾಗಿ ಯೋಚಿಸಿದಾಗ ಎಷ್ಟು ಜೀವರಾಶಿಗಳು ಇವೆ ಎಂಬುದು ಸಹ ನಮ್ಮ ಅಂದಾಜಿಗೆ ಬರುವುದಿಲ್ಲ. ಇವೆಲ್ಲವೂ ಹೇಗೆ ರೂಪಗೊಂಡಿತು? ಹೇಗೆ ಸೃಷ್ಟಿಸಲ್ಪಟ್ಟಿತು? ಯಾರು ಸೃಷ್ಟಿಸಿದರು? ಎಂಬುದನ್ನು ಅರಿಯಲು ಪ್ರಯತ್ನಿಸೋಣ.

ಈ ಸೃಷ್ಟಿಗಿಂತ ಮುಂಚೆ ಇದ್ದಿದ್ದು ಒಬ್ಬರೇ ಒಬ್ಬರು, ಅವರೇ ಬ್ರಹ್ಮ. ಈ ವಿಷಯವನ್ನು ಉಪನಿಷತ್‌ಗಳಲ್ಲಿ ತಿಳಿಸಿದ್ದಾರೆ. ಏಕಮೇವಾದ್ವಿತೀಯಂ ಬ್ರಹ್ಮ



ಅಂದರೆ ಒಬ್ಬ ಬ್ರಹ್ಮನನ್ನು ಹೊರೆತುಪಡಿಸಿ ಎರಡನೆಯದು ಇಲ್ಲ. ಈ ಬ್ರಹ್ಮನೇ ಮೂಲಚೈತನ್ಯ, ವಿಶ್ವಾತ್ಮ, ಪರಮಾತ್ಮ, ಆದಿಶಕ್ತಿ, ಪರಾಶಕ್ತಿ, ಲಲಿತಾದೇವಿ ಎನ್ನುತ್ತಾರೆ. ಯಾವ ಹೆಸರಿನಿಂದ ಕರೆದರೂ ಸಹ ಅವರ ಸಂಕಲ್ಪದಿಂದ ಈ ಸೃಷ್ಟಿಯನ್ನು ರಚನೆ ಮಾಡಿದ್ದಾರೆ.

ಜೇಡರ ಹುಳು ತನ್ನಿಂದ ಗೂಡನ್ನು ಹೇಗೆ ಸೃಷ್ಟಿಸಿತೊ, ಅದೇ ರೀತಿ ಬ್ರಹ್ಮನು ಮೊದಲು ತನ್ನಿಂದ ಪಂಚಭೂತಗಳನ್ನು, ಈ ಸಮಸ್ತ ಲೋಕಗಳನ್ನು ಸೃಷ್ಟಿಸಿದನು. ಆದುದರಿಂದ ಈ ಪಂಚಭೂತಗಳು ಸಹ ಅವರೇ ಎಂದು ಹೇಳಬಹುದು. ಅವರು ಇಲ್ಲದೇ ಹೋದರೆ ಪಂಚಭೂತಗಳು ಇರುವುದಿಲ್ಲ. ಪಂಚಭೂತಗಳು ಎಂದರೆ ಭೂಮಿ, ನೀರು, ಅಗ್ನಿ, ವಾಯು, ಆಕಾಶ.

ಆದುದರಿಂದ ಸ್ಥಳ –ಬ್ರಹ್ಮ, ಜಲ – ಬ್ರಹ್ಮ, ಅಗ್ನಿ – ಬ್ರಹ್ಮ, ವಾಯು – ಬ್ರಹ್ಮ, ಆಕಾಶವು ಸಹ ಬ್ರಹ್ಮನೇ ಎಂಬುದನ್ನು ಗ್ರಹಿಸಬೇಕು.

ಅನಂತರ ಈ ಪಂಚಭೂತಗಳಿಂದ 84 ಲಕ್ಷ ರೀತಿಯ ಜೀವಿಗಳು, ಜೀವರಾಶಿಗಳು ಸೃಷ್ಟಿಸಲ್ಪಟ್ಟವು.



ವೃಕ್ಷ ಜಾತಿ ಏಕಭೂತ ತತ್ವದಿಂದ ಅಂದರೆ ನೀರಿನಿಂದ ಸೃಷ್ಟಿಸಲ್ಪಟ್ಟಿತು.

ಆದೇ ರೀತಿ ಮಾನವ ಜನಾಂಗವು ಪಂಚಭೂತಗಳು ಅಂದರೆ ಭೂಮಿ, ನೀರು, ಅಗ್ನಿ, ವಾಯು, ಆಕಾಶಗಳಿಂದ ಸೃಷ್ಟಿಸಲ್ಪಟ್ಟವು. ಆದ್ದರಿಂದಲೇ ಮಾನವ ಶರೀರವನ್ನು ಪಾಂಚಭೌತಿಕ ಎಂದು ಕರೆಯುತ್ತಾರೆ.

ಇಲ್ಲಿ ನಾವು ಗಮನಿಸಿದಾಗ ಪಂಚಭೂತಗಳು ಬ್ರಹ್ಮನಿಂದ ಏರ್ಪಟ್ಟವು. ಅಂದರೆ ಪಂಚಭೂತಗಳು ಅವರೇ ಎಂದು ತಿಳಿಯುತ್ತದೆ. ಅದೇ ರೀತಿ ಪಂಚಭೂತಗಳಿಂದ ಈ ಸಮಸ್ತ ಜೀವಿಗಳ, ಜೀವರಾಶಿಗಳ ರಚನೆಯಾಯಿತೇ ಹೊರತು ಹೊರಗಿನಿಂದ ಬೇರೆ ಏನೋ ಬಂದು ಇದರಲ್ಲಿ ಸೇರಲಿಲ್ಲ. ಆದ್ದರಿಂದ, ಸಮಸ್ತ ಜೀವಿಗಳು, ಜೀವ ರಾಶಿಗಳಲ್ಲಿ ಬ್ರಹ್ಮನನ್ನು ಹೊರೆತುಪಡಿಸಿದರೆ ಮತ್ತೊಂದು ಇಲ್ಲ.

ಹೀಗೆ ಏರ್ಪಟ್ಟ ಆಕಾರಗಳಿಗೆ ,ಶರೀರಗಳಿಗೆ ಚೈತನ್ಯವನ್ನುಂಟು ಮಾಡಲು ಅಂದರೆ ಕದಲಿಕೆಗಳನ್ನು, ಅಭಿವೃದ್ಧಿಯನ್ನು ನೀಡಲು ಬ್ರಹ್ಮ ಎಂದರೆ ಮೂಲ ಚೈತನ್ಯ ತನ್ನಿಂದ ಅಂಶಗಳನ್ನು ಬೇರ್ಪಡಿಸಿ ಪ್ರತಿ ಆಕಾರದಲ್ಲಿ ಶರೀರದಲ್ಲಿಯೂ ಪ್ರವೇಶ ಪಡಿಸಿದನು. ಅಂದಿನಿಂದ ಅವು ಜೀವಿಸಲು ಪ್ರಾರಂಭಿಸಿತು. ಹಾಗೆ ಜೀವಿಸುವವರನ್ನು ಜೀವಿಗಳು, ಪ್ರಾಣಿಗಳು ಎನ್ನುತ್ತಾರೆ. ಅದರಲ್ಲಿರುವ ಬ್ರಹ್ಮನನ್ನೇ ಜೀವಿ ಎನ್ನುತ್ತಾರೆ. ಆದುದರಿಂದಲೇ ಜೀವಿಯೇ ದೇವರು ಎಂದು ಸಹ ಕರೆಯುತ್ತಾರೆ.

ಹಾಗೆ ಕ್ರಿಮಿಕೀಟಗಳು, ಸರ್ಪ ಜಾತಿ ದ್ವಿಭೂತ ತತ್ವದಿಂದ ಅಂದರೆ ಭೂಮಿ, ನೀರಿನಿಂದ ಸೃಷ್ಟಿಸಲ್ಪಟ್ಟಿತು.

ಪಕ್ಷಿ ಜಾತಿ ತ್ರಿಭೂತ ತತ್ವದಿಂದ ಅಂದರೆ ನೀರು, ಅಗ್ನಿ, ವಾಯುವಿನಿಂದ ಸೃಷ್ಟಿಸಲ್ಪಟ್ಟಿತು.



ಜಂತು ಜಾತಿ ನಾಲ್ಕು ಭೂತ ತತ್ವಗಳಿಂದ ಅಂದರೆ ಭೂಮಿ, ನೀರು, ಅಗ್ನಿ, ವಾಯುಗಳಿಂದ ಸೃಷ್ಟಿಸಲ್ಪಟ್ಟಿತು.



ಜೀವ ಇದ್ದರೆ... ಬ್ರಹ್ಮನಿದ್ದರೆ ಶಿವ ಎನ್ನುತ್ತಾರೆ, ಜೀವ ಇಲ್ಲದೆ ಹೋದರೆ ಬ್ರಹ್ಮ ಇಲ್ಲದೇ ಹೋದರೆ ಶವ ಎನ್ನುತ್ತಾರೆ.

ಈ ರೀತಿ ಪಂಚಭೂತಗಳು ಸಮಸ್ತ ಲೋಕಗಳು, ಸಮಸ್ತ ಜೀವಿಗಳು ಬ್ರಹ್ಮನಿಂದ ರೂಪಗೊಂಡಿರುವುದು. ಆದುದರಿಂದ ಅವರನ್ನು ಹೊರತುಪಡಿಸಿ ಬೇರೆ ಯಾರು ಇಲ್ಲವಾದುದರಿಂದ ಎಲ್ಲವೂ ಅವರೇ, ಅವರೇ ಎಲ್ಲಾ ಎನ್ನುತ್ತಾರೆ. ಬ್ರಹ್ಮನನ್ನು ಹೊರತುಪಡಿಸಿ ಅಂದರೆ ಭಗವಂತನನ್ನು ಬಿಟ್ಟು ಬೇರೆ ಏನು ಇಲ್ಲ, ಯಾರು ಇಲ್ಲ ಎಂದರ್ಥ. ಆದುದರಿಂದ, ಬ್ರಹ್ಮನನ್ನು ಸರ್ವವ್ಯಾಪಿ ಎನ್ನುತ್ತಾರೆ. ಕಾರಣ ಸಮಸ್ತವೂ ವ್ಯಾಪಿಸಿರುವುದು ಅವರೇ.

ಅಷ್ಟೇ ಅಲ್ಲದೆ ಎಲ್ಲದರಲ್ಲಿಯೂ ಅವರೇ ಇದ್ದು ಚೈತನ್ಯವನ್ನು ಉಂಟು ಮಾಡಿರುವುದು ಅವರೇ ಆಗಿರುವುದರಿಂದ ಅಂದರೆ ಬ್ರಹ್ಮನೇ ಆಗಿರುವುದರಿಂದ ಅವರನ್ನು ಸರ್ವಾಂತರ್ಯಾಮಿ ಎನ್ನುತ್ತಾರೆ. ಅಂದರೆ ಎಲ್ಲರ ಅಂತರಂಗದಲ್ಲಿ ವ್ಯಾಪಿಸಿರುವವನು ಎಂದರ್ಥ.

ಆದುದರಿಂದಲೇ ಪ್ರಹ್ಲಾದನು

"ಇಂದುಗಲಡಂದುಲೇಡನು, ಸಂದೇಹಮು ವಲದು ಚಕ್ರಿ ಸರ್ವೋಪಗತುಂ।
ದೆಂದೆಂದುವೆದಕಿ ಚೂಸಿನ
ನಂದಂದೇ ಗಲಡು ದಾನವಾಗ್ರಣಿ"

ಮೇಲಿನ ಪದ್ಯದ ಕನ್ನಡ ಅನುವಾದ:

"ಚಕ್ರಪಾಣಿಯು ಇಲ್ಲಿದ್ದಾನೆ ಅಲ್ಲಿಲ್ಲವೆನ್ನುವ ಸಂದೇಹ ಸರಿಯಲ್ಲ.
ಎಲ್ಲೆಲ್ಲಿ ಹುಡುಕಿ ನೋಡಿದರೂ ಅಲ್ಲಿಯೇ ಇರುವನು ಆ ದಾನವಾಂತಕ "

ಅಂದರೆ ಪರಬ್ರಹ್ಮ ಭಗವಂತನು, ಸರ್ವಾಂತರ್ಯಾಮಿ ಎಂದು ಪ್ರಹ್ಲಾದನು ಬಹಳ ಚೆನ್ನಾಗಿ ತಿಳಿಸಿದ್ದಾರೆ.

ಇದೇ ವಿಷಯವನ್ನು ಲಾಹಿರಿ ಮಹಾಶಯರನ್ನು ಒಮ್ಮೆ ಕೇಳಿದಾಗ, ಪ್ರಶ್ನೆಗೆ ಉತ್ತರವನ್ನು ಈ ರೀತಿ ನೀಡಿದರು.



ಪ್ರಶ್ನೆ : ಶಿವ, ವಿಷ್ಣು, ಕಾಳಿ ಈ ದೇವತೆಗಳಲ್ಲಿ ನೀವು ಯಾರನ್ನು ಧ್ಯಾನಿಸುತ್ತೀರಾ?

**ಉತ್ತರ:** ಶಿವನಲ್ಲಿ, ವಿಷ್ಣುವಿನಲ್ಲಿ, ಕಾಳಿಯಲ್ಲಿ, ನಿನ್ನಲ್ಲಿ, ನನ್ನಲ್ಲಿ ಎಲ್ಲರಲ್ಲಿಯೂ ಇರುವವನನ್ನು ಧ್ಯಾನಿಸುತ್ತೇನೆ.

ಅಷ್ಟೇ ಅಲ್ಲದೆ "ಛಾಂದೋಗ್ಯೋಪನಿಷತ್"ನಲ್ಲಿ ಈ ವಿಷಯವನ್ನು ತಿಳಿಸಿದ್ದಾರೆ: "ಸರ್ವಂ ಖಲ್ವಿದಂ ಬ್ರಹ್ಮ" ಅಂದರೆ ಸಮಸ್ತವೂ ಬ್ರಹ್ಮಮಯವಾಗಿದೆ.

ಅಷ್ಟೇ ಅಲ್ಲದೆ ಸಮಸ್ತ ಜೀವಿಗಳಲ್ಲಿಯೂ ತಾನು ಆತ್ಮ ರೂಪದಲ್ಲಿ ಇದ್ದೇನೆ ಎಂದು ಭಗವದ್ಗೀತೆಯಲ್ಲಿ ಶ್ರೀ ಕೃಷ್ಣ ಪರಮಾತ್ಮನು ತಿಳಿಸಿದ್ದಾರೆ.

ಅಂತಹ ಹಿರಿಮೆಯನ್ನು ಹೊಂದಿರುವ ಬ್ರಹ್ಮನು ನಮ್ಮ ದೇಹದಲ್ಲಿ ಅತ್ಯಂತ ಸಮೀಪವಾಗಿ ಸನ್ನಿಹಿತವಾಗಿ ಇದ್ದಾನೆ ಎಂಬ ವಿಷಯವನ್ನು ತಿಳಿಯದೆ ಅಲ್ಲಿ, ಇಲ್ಲಿ, ಪುಣ್ಯಕ್ಷೇತ್ರಗಳು, ಯಾತ್ರಾ ಸ್ಥಳಗಳು ಎನ್ನುತ್ತಾ ಕಾಶಿ ರಾಮೇಶ್ವರ, ಜೆರುಸಿಲಂ, ಮಕ್ಕಾ ಮದೀನ ಎಂದು ಅಲೆಯುತ್ತಿದ್ದೇವೆ.

ಆದುದರಿಂದಲೇ ವೀರಬ್ರಹ್ಮೇಂದ್ರ ಸ್ವಾಮಿಯವರು ಈ ರೀತಿ ತಿಳಿಸಿದ್ದಾರೆ

**ತೀರ್ಥ ಯಾತ್ರಲಂದು ದೇವುಡೊಕ್ಕಡೇ ಗದಾ**
**ಮಂಚಿ ತೀರ್ಥಮಿ (ಬ್ರಹ್ಮ) ಮನ ಪಂಚೆ ನುಂಡೆ**
**ದಿವ್ಯ ತೀರ್ಥ (ಬ್ರಹ್ಮ) ಮಿದಿಗೊ ದೇಹಮಂದುನ್ನದಿ**
**ಕಾಳಿಕಾಂಬ! ಹಂಸ! ಕಾಳಿಕಾಂಬ!**

**ತಾತ್ಪರ್ಯ:** ಯಾವ ತೀರ್ಥ ಯಾತ್ರೆಗೆ ಹೊರಟರು ದೇವರು ಒಬ್ಬರೇ ಅಲ್ಲವೇ. ಒಳ್ಳೆಯ ತೀರ್ಥ ನಮ್ಮ ಬಳಿ ಅಂದರೆ ಬ್ರಹ್ಮ ನಮ್ಮ ದೇಹದಲ್ಲಿಯೇ ಇದ್ದಾನೆ ಎಂದು ವೀರಬ್ರಹ್ಮೇಂದ್ರ ಸ್ವಾಮಿಯವರು ತಿಳಿಸಿದ್ದಾರೆ.

ಬ್ರಹ್ಮನ ಬಗ್ಗೆ ತಿಳಿದುಕೊಂಡೆವು ಈಗ ಬ್ರಹ್ಮನನ್ನು ಪಡೆಯುವ ಮಾರ್ಗವನ್ನು ತಿಳಿಯೋಣ.





# ಬ್ರಹ್ಮ ವಿದ್ಯೆ

ಬ್ರಹ್ಮನನ್ನು ಪಡೆಯುವ ಮಾರ್ಗ ಎಂದರೆ 'ಬ್ರಹ್ಮವಿದ್ಯೆ'... ಇದರ ಬಗ್ಗೆ ತಿಳಿದುಕೊಳ್ಳೋಣ.

ಜನರು ಯಾವ ವಿದ್ಯೆಯನ್ನು ತಿಳಿದುಕೊಂಡರೆ ಸಮಸ್ತ ವಿದ್ಯೆಗಳನ್ನು ಅರಿತವರಾಗುತ್ತಾರೋ... ಆ ವಿದ್ಯೆಯೇ ಬ್ರಹ್ಮವಿದ್ಯೆ.

ಅದೇ ರೀತಿ ಯಾವ ವಿದ್ಯೆಯನ್ನು ಕಲಿತುಕೊಂಡರೆ ಸಾವು ಇರುವುದಿಲ್ಲವೋ ಆ ವಿದ್ಯೆಯನ್ನೇ ಬ್ರಹ್ಮವಿದ್ಯೆ ಎನ್ನುತ್ತಾರೆ. ಎಲ್ಲರೂ ಆ ವಿದ್ಯೆಯನ್ನು ಕಲಿತುಕೊಳ್ಳಬೇಕು.



ನಾರದರು 64 ಕಲೆಗಳನ್ನು ಅಭ್ಯಾಸ ಮಾಡಿದರು, ಅಶಾಂತಿ ದೂರವಾಗಲಿಲ್ಲ. ಆಗ ಸನತ್ ಕುಮಾರರ ಬಳಿ ಬಂದು ಪ್ರಾರ್ಥಿಸಿದಾಗ ಸನತ್ ಕುಮಾರರು ಆತ್ಮವಿದ್ಯೆ ಎಂದರೆ ಬ್ರಹ್ಮ ವಿದ್ಯೆ ಎಂದು ಹೇಳಿ ಬೋಧಿಸಿದರು.

ಕಟೋಪನಿಷತ್‌ನಲ್ಲಿ ಯಮಧರ್ಮರಾಯರು ನಚಿಕೇತನಿಗೆ ಬ್ರಹ್ಮ ವಿದ್ಯೆಯನ್ನು ಬೋಧಿಸಲು ಬಹಳ ಸಂಶಯಿಸಿ, ಬಹಳಷ್ಟು ಆಲೋಚಿಸಿದರು.

ಇದಕ್ಕೆ ಕಾರಣ ಬ್ರಹ್ಮವಿದ್ಯೆ ಯೋಗ್ಯತೆ ಇರುವವರಿಗೆ ಮಾತ್ರ ಹೇಳಬೇಕು. ಅರ್ಹತೆ ಇಲ್ಲದವರಿಗೆ ಹೇಳಿದರೆ ಅದು ಅವರಿಗೆ ಅರ್ಥವಾಗದೆ ಮೂರ್ಖ ವೇದಾಂತದಿಂದ ತನಗೂ ಹಾಗು ಸಮಾಜದ ಕೆಡುಕಿಗೆ ಕಾರಣವಾಗುತ್ತದೆ ಎಂದು ಧರ್ಮರಾಜರು ಬಹಳಷ್ಟು ಸಂಶಯಿಸಿದರು.

ಆದರೆ ನಚಿಕೇತನು ಬ್ರಹ್ಮ ವಿದ್ಯೆಯನ್ನು ತಿಳಿಯಬೇಕೆಂಬ ಹಂಬಲವನ್ನು ಸಡಿಲಗೊಳಿಸದ ಕಾರಣ ಧರ್ಮರಾಜರು ಕೊನೆಗೆ ಬ್ರಹ್ಮವಿದ್ಯೆಯನ್ನು ಈ ರೀತಿ ಬೋಧಿಸಿದರು...

ನಚಿಕೇತ ಬ್ರಹ್ಮ ವಿಚಾರವಾದಕ್ಕೆ ಲಭಿಸುವುದಿಲ್ಲ. ಈ ಬ್ರಹ್ಮ ನಿಗೂಢ. ಬ್ರಹ್ಮತತ್ವವನ್ನು ಅಂದರೆ ಆತ್ಮತತ್ವದ ಬಗ್ಗೆ ಕೇಳಲು ಮಾನವರಲ್ಲಿ ಬಹಳಷ್ಟು ಜನ ಪಡೆದುಕೊಂಡು ಬಂದಿರುವುದಿಲ್ಲ. ಬಹಳಷ್ಟು ಜನ ಕೇಳಬೇಕೆಂದುಕೊಂಡರು ಈ ಬ್ರಹ್ಮ ತತ್ವವನ್ನು ಹೇಳುವವರು ಲಭಿಸುವುದು ಬಹಳ ವಿರಳ. ಒಂದು ವೇಳೆ ಉಪದೇಶಿಸುವವರು, ಹೇಳುವವರು ಲಭಿಸಿದರು ಆ ಉಪದೇಶವನ್ನು ಗ್ರಹಿಸಿ ಮನನ ಮಾಡಿ ಆಚರಣೆಯಲ್ಲಿ ಇಡುವವರು ಬಹಳ ಅಪರೂಪ. ಅಷ್ಟೇ ಅಲ್ಲದೆ ಯೋಗಿಗಳಿಂದ ಅನೇಕ ರೀತಿಯಲ್ಲಿ ಆಲೋಚಿಸುವಂತಹ ಈ ಬ್ರಹ್ಮ ತತ್ವವು ಪ್ರಾಕೃತ ಬುದ್ಧಿ ಇರುವವರು ಉಪದೇಶಿಸಲಾರರು. ಒಂದು ವೇಳೆ ಅಂತಹವರು ಉಪದೇಶಿಸಿದರು ಕೇಳಿಸಿ ಕೊಂಡವರು ಅದನ್ನು ಗ್ರಹಿಸಲಾಗುವುದಿಲ್ಲ ಎಂದು ಯಮಧರ್ಮರಾಜ ತಿಳಿಸಿದನು.

ಅವರಿನ್ನೂ ಮುಂದುವರಿಸುತ್ತಾ... ಬ್ರಹ್ಮದರ್ಶನ ಅಂದರೆ ಆತ್ಮದರ್ಶನ ಬಹಳ ಕಷ್ಟಕರ. ಯಾವಾಗಲೂ ಧ್ಯಾನ ಮಾಡುವ ವೀರರು, ಹೊರಗಿನ ವಿಷಯಗಳಿಂದ

ಇಂದ್ರಿಯಗಳನ್ನು ಹೊರಳಿಸಿ ಚಿತ್ತವನ್ನು ಅಂದರೆ ಮನಸ್ಸನ್ನು ಆತ್ಮದಲ್ಲಿ ಸ್ಥಿರವಾಗಿಸಿರುವವರು ಮಾತ್ರವೇ ಆ ಪರಮಾತ್ಮನನ್ನು ಅಂದರೆ ಬ್ರಹ್ಮನನ್ನು ತಿಳಿಯಬಹುದೆಂದು, ಅಂತಹವರು ಸಂತೋಷ ಮತ್ತು ದುಃಖ ಎರಡನ್ನು ತ್ಯಜಿಸುತ್ತಾರೆಂದು ಯಮಧರ್ಮರಾಜ ನಚಿಕೇತನಿಗೆ ತಿಳಿಸಿದನು.

ಋಗ್ವೇದಗಳೆಲ್ಲವೂ ಆ ಪರಮ ಪದವನ್ನು ಪಡೆಯಬಹುದೆಂದು ಬೋಧಿಸುತ್ತಿದೆ. ಯಾವುದನ್ನು ಪಡೆಯಲು ತಪಸ್ಸನ್ನು ಆಚರಿಸುತ್ತಿದ್ದಾರೊ, ಯಾವುದನ್ನು ಬಯಸಿ ನೈಷ್ಠಿಕ ಬ್ರಹ್ಮಚರ್ಯವನ್ನು ಆಚರಿಸುತ್ತಿದ್ದಾರೆಯೋ... ಆ ಪರಮಾರ್ಥವೇ ನಾಶವಿಲ್ಲದ ಪರಬ್ರಹ್ಮ ಎಂದು ತಿಳಿಸಲಾಗಿದೆ.

ಸೃಷ್ಟಿ ಆರಂಭವಾದ ದಿನದಿಂದ ಬ್ರಹ್ಮ ಎಂದರೆ ಆತ್ಮ... ಮನಸ್ಸು, ಇಂದ್ರಿಯಗಳ ಮೂಲಕ ಹೊರಗಿನ ವಸ್ತುಗಳ ಪರಿಚಯವನ್ನು ಪಡೆಯುತ್ತಿದೆ. ಧ್ಯಾನದ ಮೂಲಕ ಅಂತರ್ಮುಖರಾಗಿರುವವರು ಜಾಗೃತಾವಸ್ಥೆಯಲ್ಲಿ, ಸ್ವಪ್ನಾವಸ್ಥೆಯಲ್ಲಿ ಸಾಕ್ಷಿಯಾಗಿ ಎಲ್ಲವನ್ನು ನೋಡಬಲ್ಲರು. ತನ್ನನ್ನು ತಾನು ಅರಿಯಬಲ್ಲರು. ಈ ರೀತಿ ಆತ್ಮ ತತ್ವವು ಮನವರಿಕೆಯಾದವರು ಸಮಸ್ತ ದುಃಖಗಳಿಂದ ವಿಮುಕ್ತಿಯನ್ನು ಪಡೆದು ಆನಂದಾನುಭೂತಿಯನ್ನು ಪಡೆಯುತ್ತಾರೆಂದು ಯಮಧರ್ಮರಾಜ ತಿಳಿಸಿದ್ದಾನೆ.

ಓ ನಚಿಕೇತ! ಕುಟಿಲ ಚಿತ್ತವಿಲ್ಲದ, ಜನನ, ಮರಣಾದಿ ವಿಕಾರಗಳು ಇಲ್ಲದ ಪರಬ್ರಹ್ಮನಿಗೆ ದಶದ್ವಾರಗಳಿಂದ ಕೂಡಿರುವ ಈ ದೇಹವೇ ಪಟ್ಟಣ. ಅಲ್ಲಿರುವ ಪರಬ್ರಹ್ಮನನ್ನು ರಾಗ ದ್ವೇಷಗಳಿಲ್ಲದೆ ಧ್ಯಾನಿಸುವವರು ಜನನ ಮರಣ ರೂಪವಾದ ಸಂಸಾರ ಬಂಧನಗಳಿಂದ ವಿಮುಕ್ತರಾಗುತ್ತಾರೆ ಎಂದು ಹೇಳುತ್ತಾ....

ಯಾವ ಆತ್ಮ ಈ ದೇಹವನ್ನು ತ್ಯಜಿಸುವುದರ ಮೂಲಕ ಈ ದೇಹವು ಏನೂ ಇಲ್ಲದೆ ನಾಶವಾಗುತ್ತದೆಯೋ ಅದೇ 'ಪರಬ್ರಹ್ಮ ಸ್ವರೂಪ'. ಈ ಸೂರ್ಯ ಚಂದ್ರಾದಿಗಳು ಪರಬ್ರಹ್ಮನನ್ನು ಪ್ರಕಾಶಿಸುವಂತೆ ಮಾಡಲಾರೆವು. ಈ ಸೂರ್ಯ, ಚಂದ್ರ, ನಕ್ಷತ್ರಗಳೆಲ್ಲವೂ ಆ ಪರಬ್ರಹ್ಮನ ಪ್ರಕಾಶದಿಂದ ಕಂಗೊಳಿಸುತ್ತಿವೆ ಎಂದು ಹೇಳುತ್ತಾ....

ಓ ನಚಿಕೇತ! ಜನರು ಮರಣವನ್ನು ಪಡೆದು ಅವರವರ ಕರ್ಮಾನುಸಾರ ಜ್ಞಾನದ ಪ್ರಕಾರ ದೇಹವನ್ನು ಪಡೆಯುತ್ತಿದ್ದಾರೆ. ನಿದ್ರಿಸುತ್ತಿರುವ ಸಮಸ್ತ ಜೀವಿಗಳಲ್ಲಿಯೂ ಯಾವ ಪುರುಷನು ಜಾಗ್ರತವಾಗಿದ್ದಾನೆಯೋ ಅದೇ ನಾಶರಹಿತವಾದ, ಪರಿಶುದ್ಧವಾದ ಬ್ರಹ್ಮ. ಆ ಪರಮಾತ್ಮನಲ್ಲಿಯೇ ಸಮಸ್ತ ಲೋಕಗಳು ಆಶ್ರಯಿಸಿದೆ ಎಂದು ಯಮಧರ್ಮರಾಜ ತಿಳಿಸುತ್ತಾ... ಬ್ರಹ್ಮನನ್ನು ಪಡೆಯುವ ಮಾರ್ಗ ಕತ್ತಿಯ ಅಂಚಿನ ಮೇಲಿನ ನಡಿಗೆಯಂತೆ, ಆದ್ದರಿಂದ ಶ್ರೇಷ್ಠರಾದ ಗುರುವರ್ಯರ ಬಳಿ ಸೇರಿ ಬ್ರಹ್ಮ ತತ್ವವನ್ನು ತಿಳಿಯಬೇಕೆಂದು ಭೋದಿಸಿದನು.

ಅಂತಹ ಬ್ರಹ್ಮವಿದ್ಯೆ ಅಂದರೆ ಬ್ರಹ್ಮ ಜ್ಞಾನವನ್ನು ಈಗ ಬ್ರಹ್ಮರ್ಷಿಗಳಾದ ಪತ್ರೀಜಿಯವರು ಎಲ್ಲರಿಗೂ ಬೋಧಿಸುತ್ತಿದ್ದಾರೆ. ಆದ್ದರಿಂದ ಆ ಬ್ರಹ್ಮ ಜ್ಞಾನವನ್ನು ಪಡೆಯುವ ಬ್ರಹ್ಮ ವಿದ್ಯೆಯನ್ನು ನಾವು ಈಗ ತಿಳಿದುಕೊಳ್ಳೋಣ.

ಈ ಬ್ರಹ್ಮ ಜ್ಞಾನವನ್ನು ಪಡೆಯಬೇಕೆಂದರೆ ಏಳು ಸ್ಥಿತಿಗಳಿವೆ ಎಂದು ದೊಡ್ಡವರು ತಿಳಿಸಿದ್ದಾರೆ. ಇವುಗಳನ್ನು ಸಪ್ತ ಜ್ಞಾನ ಪಾತ್ರಗಳು ಎನ್ನುತ್ತಾರೆ.

ಅವು ಏನೆಂದರೆ,



1. ಶುಭೇಚ್ಛೇ
2. ವಿಚಾರಣೆ
3. ತನುಮಾನಸ
4. ಸತ್ವಾಪತ್ತಿ
5. ಅಸಂಸಕ್ತಿ
6. ಪದಾರ್ಥ ಭಾವನೆ
7. ತುರೀಯ

**ಶುಭೇಚ್ಛೇ :** ನನಗೆ ಬ್ರಹ್ಮ ಜ್ಞಾನ ಬೇಕು ಎಂಬ ಇಚ್ಛೆ ಅಂದರೆ ಕೋರಿಕೆ. ಅಷ್ಟೇ ಅಲ್ಲದೆ ನಾನು ಶಾಶ್ವತವಾದ ದುಃಖರಾಹಿತ್ಯ ಪದವಿಯನ್ನು ಪಡೆಯಬೇಕೆಂಬ ತೀವ್ರವಾದ ಆಕಾಂಕ್ಷೆ, ಅಂದರೆ ನಾನು ದುಃಖದಿಂದ, ಸಮಸ್ಯೆಗಳಿಂದ, ನೋವುಗಳಿಂದ,

ರೋಗಗಳಿಂದ, ಕಷ್ಟಗಳಿಂದ ಶಾಶ್ವತವಾಗಿ ಹೊರಬರಬೇಕೆಂಬ ತೀವ್ರವಾದ ಹಂಬಲ ಹೊಂದಿರುವುದನ್ನು ಶುಭೇಚ್ಛೇ ಎನ್ನುತ್ತಾರೆ.

**ವಿಚಾರಣೆ:** ಶುಭೇಚ್ಛೆಯನ್ನು ಹೊಂದಿರುವವರು ಈ ಬ್ರಹ್ಮ ಜ್ಞಾನವನ್ನು ಯಾವ ರೀತಿ ಪಡೆಯಬೇಕು, ಯಾರನ್ನು ಆಶ್ರಯಿಸಬೇಕೆಂದು ಆಲೋಚಿಸುತ್ತಿರುತ್ತಾರೆ. ಆ ಪ್ರಯತ್ನವನ್ನು ಮಾಡುತ್ತಾ... ಗುರುಗಳನ್ನು ಆಶ್ರಯಿಸುತ್ತಾರೆ. ಹೀಗೆ ಮಾಡುವುದನ್ನು ವಿಚಾರಣೆ ಎನ್ನುತ್ತಾರೆ. ಆಗ ಅವರಿಗೆ ಆ ಗುರುಗಳು ಬ್ರಹ್ಮಜ್ಞಾನವನ್ನು ಪಡೆಯಬೇಕೆಂದರೆ ಆಧ್ಯಾತ್ಮಿಕ ತ್ರಿರತ್ನಗಳಾದ ಧ್ಯಾನ, ಸ್ವಾಧ್ಯಾಯ, ಸಜ್ಜನ ಸಾಂಗತ್ಯಗಳನ್ನು ಬೋಧಿಸುತ್ತಾರೆ.

**ತನುಮಾನಸ :** ಹೀಗೆ ಧ್ಯಾನ ಸಾಧನೆಯ ಮಾರ್ಗವನ್ನು ತಿಳಿದ ನಂತರ ಆ ತಪನೆಯಿಂದ ನಿತ್ಯವೂ ತೀವ್ರವಾದ ಸಾಧನೆಯನ್ನು ಮಾಡುತ್ತಾ... ಆತ್ಮಜ್ಞಾನಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಓದುತ್ತಾ... ಆತ್ಮಜ್ಞಾನವನ್ನು ಬೋಧಿಸುವವರೊಂದಿಗೆ ಸಾಂಗತ್ಯವನ್ನು ಮಾಡುತ್ತಾ... ಯಾವ ದಿನವೂ ವಿಘ್ನವಿಲ್ಲದೆ ಆಚರಿಸುವುದನ್ನು ತನುಮಾನುಸ ಎಂದು ಕರೆಯುತ್ತಾರೆ.

**ಸತ್ವಾಪತ್ತಿ :** ಧ್ಯಾನ ಸಾಧನೆಯನ್ನು ಮಾಡುತ್ತಾ.. ಸಾತ್ವಿಕವಾದ ಶಾಕಾಹಾರವನ್ನು ಸ್ವೀಕರಿಸುತ್ತಾ.. ಶುದ್ಧ ಸಾತ್ವಿಕ ಸ್ಥಿತಿಯನ್ನು ಸಾಧಿಸುವುದೇ ಸತ್ವಾಪತ್ತಿ. ಅಂದರೆ ಧ್ಯಾನದ ಮೂಲಕ ತಮೋಗುಣ, ರಜೋಗುಣ ಎಂಬುದು ಪೂರ್ತಿಯಾಗಿ ಶೂನ್ಯವಾದ ಸ್ಥಿತಿ. ಆಗ ಉಳಿಯುವುದು ಶುದ್ಧ ಸಾತ್ವಿಕಸ್ಥಿತಿ.

ತಮೋಗುಣ ಎಂದರೆ ಸೋಮಾರಿತನ, ರಜೋಗುಣ ಎಂದರೆ ನನಗೆ ಗೊತ್ತಿದೆ ಎಂಬ ಗರ್ವ, ಅಧಿಕಾರ ದರ್ಪ, ಇವು ದೂರವಾಗಿರುವ ಸ್ಥಿತಿಯನ್ನು ಶುದ್ಧ ಸಾತ್ವಿಕ ಸ್ಥಿತಿ ಎನ್ನುತ್ತೇವೆ.

ಈ ನಾಲ್ಕನೆಯ ಜ್ಞಾನ ಪಾತ್ರದಲ್ಲಿ ಧ್ಯಾನ, ಸ್ವಾಧ್ಯಾಯ ಸಜ್ಜನ ಸಾಂಗತ್ಯಗಳು ತೀವ್ರ ಹಂತಕ್ಕೆ ತಲುಪಿರುವ ಸ್ಥಿತಿ. ಆ ತೀವ್ರತೆಯಿಂದ ನಾಡೀಮಂಡಲವು ಪೂರ್ತಿಯಾಗಿ ಶುದ್ಧವಾಗುತ್ತದೆ. ಮನಸ್ಸು ಪೂರ್ತಿಯಾಗಿ ಹತೋಟಿಗೆ ಬರುತ್ತದೆ. ಇದನ್ನು ಯೋಗಿಯಾದ ಸ್ಥಿತಿಯೆಂದು ಹೇಳಬಹುದು.

ಅಷ್ಟೇ ಅಲ್ಲದೆ "ಅಹಂ ಬ್ರಹ್ಮಾಸ್ಮಿ" ಎಂದು ಸಿದ್ಧಾಂತ ಪರವಾಗಿ ಬಹಳ ಚೆನ್ನಾಗಿ ತಿಳಿದುಕೊಳ್ಳುತ್ತಾರೆ. "ಬ್ರಹ್ಮವಿದು" ಆಗಿರುವ ಸ್ಥಿತಿಯೆಂದು ಹೇಳಬಹುದು.

**ಅಸಂಸಕ್ತಿ :** ಹೀಗೆ ಸಾಧನೆಯು ಮುಂದುವರೆಯುತ್ತಿದ್ದರೆ... ನಿಧಾನವಾಗಿ ಮೂರನೇ

ಕಣ್ಣು (ದಿವ್ಯ ಚಕ್ಷು) ಉತ್ತೇಜನವಾಗುತ್ತದೆ. ಶರೀರ ಮತ್ತು ಸಂಸಾರ ಎರಡೂ ಸಹ ತಾತ್ಕಾಲಿಕವಾದುದು ಎಂಬುದನ್ನು ಸಂಪೂರ್ಣವಾಗಿ ತಿಳಿದುಕೊಳ್ಳುತ್ತಾರೆ. ಆಗ ಆ ಎರಡರ ಬಗ್ಗೆಯೂ ಪೂರ್ತಿಯಾಗಿ ಅನಾಸಕ್ತಿ ಉಂಟಾಗುತ್ತದೆ. ಆ ಸ್ಥಿತಿಯನ್ನೇ ಅಸಂಸಕ್ತಿ ಎನ್ನುತ್ತಾರೆ.

ಆಗ ತಾವರೆ ಎಲೆಯ ಮೇಲಿನ ನೀರಿನ ಹನಿಯಂತೆ ಇರುತ್ತಾರೆ. ಅವರಿಗೆ ಸಂಸಾರದಲ್ಲಿ ಅನಾಸಕ್ತಿ ಇದ್ದರು, ಧರ್ಮನಿಷ್ಠೆ, ಕರ್ಮನಿಷ್ಠೆ ಇರುತ್ತದೆ. ಅಂದರೆ ಶರೀರದ ಬಗ್ಗೆ ಮತ್ತು ಸಂಸಾರದ ಬಗ್ಗೆ ತಟಸ್ಥ ದೃಷ್ಟಿಯನ್ನು ಹೊಂದಿರುತ್ತಾರೆ.

ಅವರಿಗೆ ಮೂರನೇ ಕಣ್ಣು ಉತ್ತೇಜನವಾಗುತ್ತದೆ. ಸತ್ಯದ್ರಷ್ಟರಾಗುತ್ತಾರೆ. ಆಗ ಪೂರ್ತಿಯಾಗಿ ಅದರ ಮೇಲೆಯೇ ಆಸಕ್ತಿಯನ್ನು, ಏಕಾಗ್ರತೆಯನ್ನು ಕೇಂದ್ರೀಕರಿಸುತ್ತಾರೆ. ಇದನ್ನು ಅಸಂಸಕ್ತಿ ಎನ್ನುತ್ತಾರೆ. ಆಗ ಅವರನ್ನು "ಬ್ರಹ್ಮವಿದುರ" ಎನ್ನುತ್ತಾರೆ.

**ಪದಾರ್ಥ ಭಾವನೆ :** ಈ ಸ್ಥಿತಿಯಲ್ಲಿ ಮೂರನೇ ಕಣ್ಣನ್ನು ಬಹಳ ಚೆನ್ನಾಗಿ ಉಪಯೋಗಿಸಿಕೊಳ್ಳುತ್ತಾರೆ. ಹಾಗೆಯೆ ಪ್ರತಿ ಪದದ ಅರ್ಥದೊಂದಿಗೆ ಪ್ರತಿ ವಸ್ತುವಿನ ಭಾವನೆಯಲ್ಲಿ ಪ್ರತ್ಯಕ್ಷವಾಗಿ ಇರುತ್ತಾರೆ. ಅಂದರೆ "ಬ್ರಹ್ಮ ವಿದ್ವರಿಯ" ನಾದ ಸ್ಥಿತಿ ಎಂದು ಹೇಳುತ್ತಾರೆ. ಇದನ್ನು ಸಿದ್ಧ ಸ್ಥಿತಿ, ಸವಿಕಲ್ಪ ಸಮಾಧಿ ಸ್ಥಿತಿ ಎಂದು ಸಹ ಕರೆಯುತ್ತಾರೆ. ಅಂದರೆ ಎಷ್ಟೋ ಉತ್ತರಗಳು ಲಭಿಸುತ್ತಿದ್ದರೂ ಇನ್ನೂ ಸ್ವಲ್ಪ ಸಂಶಯಗಳು ಇರುವ ಸ್ಥಿತಿ.

**ತುರಿಯ :** ಇದು ಮಾನವನ ಪೂರ್ಣವಿಕಾಸ ಸ್ಥಿತಿ. ಸಿದ್ಧನು ಬುದ್ಧನಾದ ಸ್ಥಿತಿ. ಎಲ್ಲರನ್ನೂ ಯೋಗಿಗಳಾಗಿ, ಸಿದ್ಧರಾಗಿ, ಬುದ್ಧರಂತೆ ರೂಪಿಸಲು ಟೊಂಕ ಕಟ್ಟಿಕೊಂಡಿರುವ ಕ್ರಮದಲ್ಲಿ ಪೂರ್ತಿಯಾಗಿ ಲೀನವಾಗಿರುವವರನ್ನು ಬುದ್ಧರು ಎನ್ನುತ್ತಾರೆ. ಇದನ್ನು ಸಹಸ್ರದಳ ಕಮಲ ಎನ್ನುತ್ತಾರೆ. ಇದನ್ನೇ ಸಾವಿರ ಎಡೆಗಳ ಹಾವು ಎಂದು ಸಹ ಕರೆಯುತ್ತಾರೆ.

ಇಂಥವರು ಒಬ್ಬೊಬ್ಬ ಮನುಷ್ಯನನ್ನು ಯೋಗಿಯಾಗಿ ರೂಪಿಸಿದಾಗ ಸಹಸ್ರದಳ ಕಮಲದಲ್ಲಿ ಒಂದೊಂದು ರೆಕ್ಕೆಯು ಅರಳುತ್ತದೆ. ಇಂತಹವರನ್ನು ಬ್ರಹ್ಮ ವಿದ್ವರಿಷ್ಠ ಎನ್ನುತ್ತಾರೆ.

ತುರಿಯ ಎಂದರೆ ಸರ್ವೇ ಸಾಮಾನ್ಯವಾದಂತಹ ಜಾಗೃತ, ಸ್ವಪ್ನ, ಸುಷುಪ್ತಿ ಸ್ಥಿತಿಗಳನ್ನು ದಾಟಿರುವವರು ಎಂದರ್ಥ. ತುರಿಯ ಎಂದರೆ ಮೂರನ್ನು ದಾಟಿರುವ ಸ್ಥಿತಿ. ಅಂದರೆ ನಿರ್ವಿಕಲ್ಪ ಸಮಾಧಿ ಸ್ಥಿತಿಗೆ ತಲುಪಿರುವ ಸ್ಥಿತಿ. ಸಮಾಧಿ ಎಂದರೆ ಉತ್ತರಗಳನ್ನು

ತಿಳಿದುಕೊಂಡಿರುವ ಸ್ಥಿತಿ. ನಿರ್ವಿಕಲ್ಪ ಸಮಾಧಿ ಎಂದರೆ ಯಾವ ಸಂದೇಹಗಳು, ಸಂಶಯಗಳು ಇಲ್ಲದ ಸ್ಥಿತಿ.

ಅಂತಹವರನ್ನು "ಬ್ರಹ್ಮಜ್ಞಾನಿ" ಎನ್ನುತ್ತಾರೆ.

.ಆದರೆ ಈ ಸ್ಥಿತಿಯನ್ನು ತಲುಪಿ ಆ ಜ್ಞಾನವನ್ನು ಪಡೆಯುವುದು ಅಷ್ಟು ಸುಲಭವಾದ ವಿಷಯವಲ್ಲ. ಬಹಳ ಕಷ್ಟ ಪಡಬೇಕು. ಬಹಳ ಶ್ರಮವಹಿಸಬೇಕು. ಬಹಳ ಸಾಧನೆ ಮಾಡಬೇಕು.

ಆದ್ದರಿಂದಲೇ ಬ್ರಹ್ಮನನ್ನು ಪಡೆಯುವುದು ಅಷ್ಟು ಸುಲಭವಲ್ಲ ಎಂದು ಕಠೋಪನಿಷತ್ ನಲ್ಲಿಯೂ ಸಹ ತಿಳಿಸಿದ್ದಾರೆ.

**"ಏಷ ಸರ್ವೇಷು ಭೂತೇಷು ಗೂಢೊತ್ಮಾನ ಪ್ರಕಾಶತೆ|**

**ದೃಶ್ಯತೆ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ||"**

**~~(ಕಠೋಪನಿಷತ್ 3–12)**

ಎಲ್ಲಾ ಜೀವಿಗಳಲ್ಲಿಯೂ ಗುಪ್ತವಾಗಿರುವ ಈ ಆತ್ಮ (ಬ್ರಹ್ಮ) ಎಲ್ಲರಿಗೂ ಪ್ರಕಟಿತವಾಗುವುದಿಲ್ಲ. ಸೂಕ್ಷ್ಮದರ್ಶಿಗಳಾದ ಋಷಿಗಳು ಮಾತ್ರ ತೀಕ್ಷ್ಣವಾದ ಏಕಾಗ್ರತೆಯಿಂದಿರುವ ತಮ್ಮ ಬುದ್ಧಿಯ ಮೂಲಕ ಈ ಆತ್ಮನನ್ನು (ಬ್ರಹ್ಮನನ್ನು) ಸಾಕ್ಷಾತ್ಕರಿಸಿ ಕೊಳ್ಳಬಲ್ಲರು.

**~~ರಾಮಕೃಷ್ಣ ಮಿಷನ್ ಮುದ್ರಣ**



ಅಪಾರಶಕ್ತಿವಂತನಾದ, ಮಹಿಮಾನ್ವಿತನಾದ 'ಬ್ರಹ್ಮ' ತನ್ನ ದೇಹದಲ್ಲಿದ್ದರೂ ಸಹ ಅರಿಯದೆ... ಮಾನವನು ಮನಸ್ಸನ್ನು ಅನುಸರಿಸಿ ಜೀವಿಸುತ್ತಿರುವುದರಿಂದ, ದುಃಖಕ್ಕೀಡಾಗಿ ಮುಕ್ತಿಯನ್ನು ಹೊಂದಲಾಗುತ್ತಿಲ್ಲ. ಅಂತಹ ಮುಕ್ತಿಯನ್ನು ಪಡೆಯಬೇಕೆಂದರೆ ಮನಸ್ಸನ್ನು ಶೂನ್ಯವಾಗಿಸಬೇಕು. ಮನಸ್ಸನ್ನು ಶೂನ್ಯವಾಗಿಸಿ ಬ್ರಹ್ಮನನ್ನು ಪಡೆದರೆ ಮುಕ್ತಿಯನ್ನು ಪಡೆದಂತೆ.

ಈ ವಿಷಯವನ್ನು ಯೋಗಿಗಳು ಬಹಳ ಸ್ಪಷ್ಟವಾಗಿ ತಿಳಿಸಿದ್ದಾರೆ. ಬ್ರಹ್ಮನನ್ನು ಪಡೆಯಬೇಕೆಂದರೆ ಮನಸ್ಸನ್ನು ಇಲ್ಲದಂತೆ ಮಾಡಿಕೊಳ್ಳಬೇಕು. ಅಂದರೆ ಮನಸ್ಸನ್ನು ಶೂನ್ಯವಾಗಿಸಬೇಕು, ಅಂತರ್ನಿಶ್ಯಬ್ದವನ್ನು ಸಾಧಿಸಬೇಕು, ಚಿತ್ತವನ್ನು ಅಂದರೆ ಮನಸ್ಸನ್ನು ನಿಶ್ಚಲವಾಗಿಸಬೇಕು. ಚಿತ್ತವೃತ್ತಿಗಳನ್ನು ತಡೆದು, ನಿರ್ಗುಣೀ ಆಗಬೇಕೆಂದರೆ ಮನಸ್ಸನ್ನು ಆತ್ಮದಲ್ಲಿ ಲಯವಾಗಿಸಬೇಕು. ಮನಸ್ಸಿನ ಸೆರೆಯಲ್ಲಿರುವ ಇಂದ್ರಿಯಗಳನ್ನು ಮನಸ್ಸಿನ ಸೆರೆಯಿಂದ ಬಿಡಿಸಬೇಕು. ಅಂದರೆ ದೇಹ ಭಾವನೆಯನ್ನು ಹೋಗಲಾಡಿಸಬೇಕು. ಆಗಲೇ ಯಾರಾದರೂ ಸರಿ ಬ್ರಹ್ಮನನ್ನು ಪಡೆಯಲು ಸಾಧ್ಯ. ಅದರ ಮುಖಾಂತರ ಆತ್ಮ ಜ್ಞಾನವನ್ನು ಅಂದರೆ ಬ್ರಹ್ಮ ಜ್ಞಾನವನ್ನು ಪಡೆಯಲು ಸಾಧ್ಯ. ಇದರಿಂದ ಕರ್ಮರಾಹಿತ್ಯ ಮಾಡಿಕೊಂಡು ಮುಕ್ತಿಯನ್ನು ಪಡೆಯಲು ಸಾಧ್ಯವಾಗುತ್ತದೆ ಎಂದು ಯೋಗಿಗಳು ತಿಳಿಸಿದ್ದಾರೆ.

ಮುಕ್ತಿಯನ್ನು ಪಡೆಯಬೇಕೆಂದು ಕಾಂಕ್ಷಿಸುವ ಪ್ರತಿಯೊಬ್ಬರಿಗೂ ಬ್ರಹ್ಮನನ್ನು ಪಡೆಯಿರಿ ಎಂದು ಯೋಗಿಗಳು ತಿಳಿಸಿದ್ದಾರೆ. ಅವರೆಲ್ಲರೂ ಹೇಳಿರುವುದನ್ನು ಈಗ ನಾವು ನೋಡೋಣ:

## ಶೃತಿ ವಾಕ್ಯ

"ಮನಯೇವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಮ್"!!

ಮಾನವರ ಬಂಧನಕ್ಕೆ ಅಂದರೆ ದುಃಖಕ್ಕೆ, ಮೋಕ್ಷ ಎಂದರೆ ಆನಂದಕ್ಕೆ ಮನಸ್ಸೇ ಕಾರಣವೆಂದು ಶ್ರುತಿ ವಾಕ್ಯದಿಂದ ಅರ್ಥಮಾಡಿಕೊಳ್ಳಬಹುದು.

ಮನಸ್ಸೇ ಬ್ರಹ್ಮನನ್ನು ಪಡೆಯಲು, ಬ್ರಹ್ಮನನ್ನು ತಿಳಿಯಲು ಅಡ್ಡಿಯಾಗಿರುವುದು. ಆದುದರಿಂದಲೇ ಮನಸ್ಸಿದ್ದರೆ ದುಃಖ. ಮನಸ್ಸನ್ನು ಶೂನ್ಯವಾಗಿಸಿ ಬ್ರಹ್ಮನನ್ನು ಪಡೆದರೆ ಮೋಕ್ಷವೆಂದು ಶ್ರುತಿವಾಕ್ಯದಲ್ಲಿನ ಅರ್ಥ.

ಮನಸ್ಸು ಶೂನ್ಯವಾಗಬೇಕೆಂದರೆ 'ಉಸಿರಾಟದ ಮೇಲೆ ಗಮನ'ವನ್ನು ಹರಿಸಬೇಕು. ಇದೆ ಬ್ರಹ್ಮರ್ಷಿ ಪತ್ರೀಜಿಯವರು ಬೋಧಿಸಿರುವುದು.

## ಬ್ರಹ್ಮರ್ಷಿ ಪಿತಾಮಹ ಪತ್ರೀಜಿ



**ಧ್ಯಾನದಿಂದ ಜ್ಞಾನ – ಜ್ಞಾನದಿಂದ ಮುಕ್ತಿ**

ಧ್ಯಾನವೆಂದರೆ "ಉಸಿರಾಟದ ಮೇಲೆ ಗಮನ". ಹೀಗೆ ಮಾಡುವುದರಿಂದ ಆಲೋಚನಾ ರಹಿತ ಸ್ಥಿತಿ ಅಂದರೆ ಶೂನ್ಯ ಸ್ಥಿತಿಯನ್ನು ಪಡೆದಾಗ ವಿಶ್ವದಲ್ಲಿನ ಪ್ರಾಣಶಕ್ತಿಯ ಆವಾಹನೆಯ ಮೂಲಕ ನಾಡಿಮಂಡಲ ಶುದ್ಧಿ ನಡೆಯುತ್ತದೆ. ಇದರಿಂದ ದಿವ್ಯಚಕ್ಷು ಉತ್ತೇಜನವಾಗಿ ಆತ್ಮಜ್ಞಾನವನ್ನು ಪಡೆದು ಕರ್ಮಗಳನ್ನು ದಗ್ಧ ಮಾಡಿಕೊಳ್ಳುವುದರ ಮೂಲಕ ಮುಕ್ತಿಯನ್ನು ಪಡೆಯಬಹುದೆಂದು ಬ್ರಹ್ಮರ್ಷಿ ಪಿತಾಮಹ ಪತ್ರೀಜಿ ಬೋಧಿಸುತ್ತಿದ್ದಾರೆ.

## ಯೋಗಾನಂದ ಪರಮಹಂಸ



ಕ್ರಿಯಾಯೋಗದ ಮೂಲಕ ಅಂತರ್ನಿಃಶ್ಶಬ್ದವನ್ನು ಸಾಧಿಸಿದರೆ ಮುಕ್ತಿಯನ್ನು ಪಡೆಯಬಹುದು.

ಕ್ರಿಯೆ ಎಂದರೆ ಉಸಿರಾಟ ಕ್ರಿಯೆ. ಯೋಗ ಎಂದರೆ ಕೂಡುವುದು. ಉಸಿರಿನೊಂದಿಗೆ ಕೂಡುವುದು ಎಂದರೆ ಉಸಿರಾಟದ ಮೇಲೆ ಗಮನವನ್ನು ಹರಿಸುವುದರ ಮೂಲಕ ಮನಸ್ಸನ್ನು ಶೂನ್ಯವಾಗಿಸಿ ಅಂತರ್ನಿಃಶ್ಶಬ್ದವನ್ನು

ಅಂದರೆ ಆಲೋಚನೆಗಳಿಲ್ಲದ ಸ್ಥಿತಿಯನ್ನು ಪಡೆದಾಗ ಬ್ರಹ್ಮನನ್ನು ಪಡೆಯಬಹುದು. ಇದರಿಂದ ದುಃಖದಿಂದ ಹೊರ ಬರಬಹುದು, ಮುಕ್ತಿಯನ್ನು ಪಡೆಯಬಹುದೆಂದು ಯೋಗಾನಂದರು ತಿಳಿಸಿದ್ದಾರೆ.

## ಅವತಾರ್ ಮೆಹರ್ ಬಾಬಾ



"The Real Things that are given & received only in Silence"

ಮಾನವನಿಗೆ ನಿಜವಾಗಿ ಬೇಕಾಗಿರುವ ಶಾಂತಿ, ಆನಂದ, ಧರ್ಮ, ಪ್ರೀತಿ. ಕರುಣೆ, ಜ್ಞಾನ ಎಲ್ಲವೂ ಸಹ ನಿಶ್ಶಬ್ದದಲ್ಲಿ ಅಂದರೆ ಮನಸ್ಸಿಲ್ಲದ ಬ್ರಹ್ಮ ಸ್ಥಿತಿಯಲ್ಲಿಯೇ ಲಭಿಸುತ್ತದೆ ಎಂದು ಮೆಹರ್ ಬಾಬಾ ಅವರು ತಿಳಿಸಿದ್ದಾರೆ.

## ಆದಿ ಶಂಕರಾಚಾರ್ಯರು



ಸತ್ಸಂಗತ್ವೆ ನಿಸ್ಸಂಗತ್ವಂ

ನಿಸ್ಸಂಗತ್ವೆ ನಿರ್ಮೋಹತ್ವಂ

ನಿರ್ಮೋಹತ್ವೆ ನಿಶ್ಚಲಚಿತ್ತಂ

ನಿಶ್ಚಲಚಿತ್ತೆ ಜೀವನ್ಮುಕ್ತಿ!

ನಿಶ್ಚಲ ಚಿತ್ತ ಎಂದರೆ ಮನಸ್ಸು ನಿಶ್ಚಲವಾದಾಗ, ಶೂನ್ಯವಾದಾಗ ಮುಕ್ತಿ ಲಭಿಸುತ್ತದೆ ಎಂದು ಶಂಕರಾಚಾರ್ಯರ ಸಂದೇಶ. ಜೀವನ್ಮುಕ್ತಿ ಎಂದರೆ ಜೀವಿಸಿರುವಾಗಲೇ ಮುಕ್ತಿ ಎಂದರ್ಥ.

## ಪತಂಜಲಿ ಮಹರ್ಷಿ

**ಯೋಗಃ ಚಿತ್ತವೃತ್ತಿ ನಿರೋಧಃ**

ಚಿತ್ತವೃತ್ತಿಗಳನ್ನು ತಡೆಯುವುದೇ ಯೋಗ ಎಂದು ಪತಂಜಲಿ ಮಹರ್ಷಿ ಅವರು



ತಿಳಿಸಿದ್ದಾರೆ. ಇದರ ಅರ್ಥ ಯೋಗ ಸ್ಥಿತಿಯನ್ನು ಪಡೆಯಬೇಕೆಂದರೆ ಚಿತ್ತದಲ್ಲಿರುವ ವೃತ್ತಿಗಳನ್ನು ಅಂದರೆ ಆಲೋಚನೆಗಳನ್ನು ತಡೆಯಬೇಕು. ಮನಸ್ಸನ್ನು ಶೂನ್ಯವಾಗಿಸಬೇಕು. ಅದರ ಮಾರ್ಗವೇ ಉಸಿರಾಟದ ಮೇಲೆ ಗಮನ. ಈ ರೀತಿಯಾಗಿ ಯೋಗ ಸ್ಥಿತಿಯನ್ನು ಅಂದರೆ ಬ್ರಹ್ಮ ಸ್ಥಿತಿಯನ್ನು ಪಡೆದರೆ ಅವರು ದುಃಖದಿಂದ ಹೊರ ಬರುತ್ತಾರೆ.

## ಶ್ರೀ ಕೃಷ್ಣ ಪರಮಾತ್ಮ



1. "ಯೋಗೋ ಭವತಿ ದುಃಖಃ"

ಯೋಗಿ ಆದವರಿಗೆ ಅಂದರೆ ಬ್ರಹ್ಮಾನುಭೂತಿಯನ್ನು ಪಡೆದವರಿಗೆ ದುಃಖ ಇರುವುದಿಲ್ಲ.

2. "ತ್ರೈಗುಣ್ಯಾ ವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನಾ"

" ಅರ್ಜುನ ತ್ರಿಗುಣಗಳಿಗೆ ಅತೀತವಾಗಿರುವ ನಿರ್ಗುಣನಾಗು ಎಂದಿದ್ದಾರೆ ಶ್ರೀ ಕೃಷ್ಣ ಪರಮಾತ್ಮ. ಮನಸ್ಸನ್ನು ಶೂನ್ಯವಾಗಿಸಿದರೆ ನಿರ್ಗುಣೀಯಾಗಬಹುದು. ಸತ್ವ ರಜೊ ತಮೋ ಗುಣಗಳಿಗೆ ಅತೀತನಾಗಬಹುದು. ಆ ಮಾರ್ಗವೇ ಉಸಿರಾಟದ ಮೇಲೆ ಗಮನ – "ಧ್ಯಾನ".

## ಶ್ರೀ ವೀರ ಬ್ರಹ್ಮೇಂದ್ರ ಸ್ವಾಮಿ



**ಸ್ನಾನದಲ್ಲಿಯು ಇಲ್ಲ, ಪಾನದಲ್ಲಿಯು ಇಲ್ಲ**

**ಮಂತ್ರತಂತ್ರದಲ್ಲಿಯು ಇಲ್ಲ**

**ಮನಸ್ಸು ನಿಶ್ಚಲವಾದಾಗ ಮಹಾನ್ ಯೋಗಿ ತಾನಾಗುತ್ತಾನೆ**

**ಕಾಳಿಕಾಂಬ ಹಂಸಕಾಳಿಕಾಂಬ!**

ನದೀ ಸ್ನಾನಗಳಲ್ಲಿ, ಸಮುದ್ರ ಸ್ನಾನಗಳಲ್ಲಿ ಏನೂ

ಇಲ್ಲ. ದೇವಸ್ಥಾನಗಳಲ್ಲಿ ತೆಗೆದುಕೊಳ್ಳುವ ತೀರ್ಥವನ್ನಾಗಲಿ, ಗಂಗಾ ತೀರ್ಥವನ್ನಾಗಲಿ ಪಾನ ಮಾಡಿದರು ಫಲಿತಾಂಶ ಇರುವುದಿಲ್ಲ. ಮಂತ್ರ ತಂತ್ರಗಳಲ್ಲಿಯೂ ಏನೂ ಇಲ್ಲ. ಮನಸ್ಸನ್ನು ಧ್ಯಾನದಲ್ಲಿ ನಿರ್ಗುಣ ಸ್ಥಿತಿಗೆ ಸೇರಿಸಲು ಸಾಧ್ಯವಾದರೆ ಬ್ರಹ್ಮ ಸ್ಥಿತಿಯನ್ನು ಪಡೆಯಬಲ್ಲನು, ದುಃಖದಿಂದ ಹೊರಬರಬಲ್ಲನು, ಅದೇ ಮುಕ್ತಿ.

## ರಮಣ ಮಹರ್ಷಿ



**ಮನಸ್ಸನ್ನು ಆತ್ಮದಲ್ಲಿ ಲಯವಾಗಿಸಬೇಕು ಅಂದರೆ ಮನಸ್ಸು ಶೂನ್ಯ ಸ್ಥಿತಿಗೆ**

ತಲುಪಿದರೆ ಆತ್ಮದಲ್ಲಿ ಅಂದರೆ ಬ್ರಹ್ಮದಲ್ಲಿ ಲಯವಾದಂತೆ. ಅದೇ ಮುಕ್ತ ಸ್ಥಿತಿ. ಉಸಿರಾಟದ ಮೇಲೆ ಗಮನದ ಮೂಲಕ ಅತಿಸುಲಭವಾಗಿ ಸಾಧಿಸಬಹುದು. ದುಃಖದಿಂದ ಹೊರ ಬರಬಹುದು.

## ಕಲ್ಕಿ ಭಗವಾನ್



ಮನಸ್ಸಿನ ಸೆರೆಯಲ್ಲಿರುವ ಇಂದ್ರಿಯಗಳನ್ನು ಮನಸ್ಸಿನ ಸೆರೆಯಿಂದ ಬಿಡಿಸುವುದೇ ಮುಕ್ತಿ.

ಮಾನವನ ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು, ಮನಸ್ಸು ಹೇಳಿದ ರೀತಿಯಲ್ಲಿ ಕಾರ್ಯನಿರ್ವಹಿಸುತ್ತದೆ. ಆದ್ದರಿಂದ ಅವು ಮನಸ್ಸಿನ ಸೆರೆಯಲ್ಲಿ ಇದ್ದಂತೆ. ಈ ರೀತಿ ಮನಸ್ಸಿನ ಸೆರೆಯಲ್ಲಿ ಇಂದ್ರಿಯಗಳು ಇದ್ದರೆ ಮಾನವನ ಜೀವನ ದುಃಖ ಭರಿತವಾಗಿರುತ್ತದೆ. ಆದುದರಿಂದ, ಅವುಗಳನ್ನು ಮನಸ್ಸಿನ ಸೆರೆಯಿಂದ ಬಿಡಿಸಬೇಕು. ಮನಸ್ಸು ಇದ್ದರೆ ಇಂದ್ರಿಯಗಳು ಮನಸ್ಸಿನ ಸೆರೆಯಲ್ಲಿ ಇದ್ದಂತೆ... ಮನಸ್ಸನ್ನು ಶೂನ್ಯವಾಗಿಸಿದರೆ ಇಂದ್ರಿಯಗಳಿಗೆ ಸ್ವಾತಂತ್ರ್ಯ ಲಭಿಸಿದಂತೆ. ಆಗ ಮಾನವರಿಗೆ ದುಃಖದಿಂದ ವಿಮುಕ್ತಿ ಲಭಿಸುತ್ತದೆ.

**ಮನಸ್ಸನ್ನು ಶೂನ್ಯವಾಗಿಸುವ ಮಾರ್ಗವೇ ಉಸಿರಾಟದ ಮೇಲೆ ಗಮನ– ಧ್ಯಾನ**

## ಭಗವಾನ್ ಶ್ರೀ ಸತ್ಯಸಾಯಿಬಾಬಾ

**ದೇಹ ಭಾವನೆಯನ್ನು ತ್ಯಜಿಸಿದರೆ ದೈವ ಭಾವನೆ ಮೂಡುತ್ತದೆ.**

ಮಾನವರಿಗೆ ದೇಹ ಭಾವನೆ ಇರುವಷ್ಟು ಕಾಲ ಎಲ್ಲಾ ರೀತಿಯ ದುಃಖಗಳು ದೂರವಾಗುವುದಿಲ್ಲ. ಮನಸ್ಸನ್ನು ಶೂನ್ಯವಾಗಿಸಿದರೆ ಕೂಡಲೇ ದೈವ ಭಾವನೆ ಅಂದರೆ ಬ್ರಹ್ಮ ಭಾವನೆ ಮೂಡುತ್ತದೆ, ದುಃಖದಿಂದ ಮುಕ್ತರಾಗುತ್ತಾರೆ, ಆನಂದದಿಂದ ಇರುತ್ತಾರೆ. ಅದರ ಮಾರ್ಗವೇ ಉಸಿರಾಟದ ಮೇಲೆ ಗಮನ – ಧ್ಯಾನ

## ಜೀಸಸ್ ಕ್ರೈಸ್ಟ್

"For Forty days and Forty nights he ate nothing!"

40 ದಿನಗಳು ಜೀಸಸ್ ಏನು ತಿನ್ನಲಿಲ್ಲ... ಅಂದರೆ ಮನಸ್ಸಿನಿಂದ ತಿನ್ನದೇ ಅಂದರೆ ಆಲೋಚಿಸದೆ, ಚಿತ್ತವೃತ್ತಿಗಳನ್ನು ತಡೆದು, ಅಂತರ್ನಿಶ್ಶಬ್ದದೊಂದಿಗೆ 40 ದಿನಗಳು ಧ್ಯಾನ ಮುದ್ರೆಯಲ್ಲಿದ್ದು, ದಿವ್ಯತ್ವವನ್ನು ಅಂದರೆ ಬ್ರಹ್ಮತ್ವವನ್ನು ಪಡೆದರು. ನಿರ್ವಿಕಲ್ಪ ಸಮಾಧಿಯನ್ನು ಹೊಂದಿದರು.

## ಗೌತಮ ಬುದ್ಧ

ಮಾನವನು ನಿರ್ವಾಣವನ್ನು ಅಂದರೆ ಸಮಸ್ತ ದುಃಖಗಳಿಂದ ಶಾಶ್ವತವಾಗಿ ಹೊರ ಬರಬೇಕೆಂದರೆ ಆನಾಪಾನಸತಿ ಧ್ಯಾನ ಮಾಡಬೇಕೆಂದು ಬೋಧಿಸಿದರು. ಆನಾಪಾನಸತಿ ಎಂದರೆ ಉಸಿರಾಟದ ಮೇಲೆ ಗಮನ. ಈ ರೀತಿ ಗಮನ ಹರಿಸುವುದರಿಂದ ಚಿತ್ತವೃತ್ತಿಗಳನ್ನು ತಡೆದು, ವಿಶ್ವಶಕ್ತಿ ಪ್ರವೇಶಿಸಿ, ಬ್ರಹ್ಮಸಾಕ್ಷಾತ್ಕಾರ ದಿಂದ ಸಮಸ್ತ ದುಃಖಗಳಿಂದ ಹೊರಬರಬಹುದೆಂದು ಬೋಧಿಸಿದರು.

## ಬ್ರಹ್ಮರ್ಷಿ ಪಿತಾಮಹ ಪತ್ರೀಜಿ

ಆಧ್ಯಾತ್ಮಿಕ ಶಾಸ್ತ್ರವಿಜ್ಞಾನವು ಅನುಭವ ಪ್ರಕಾರವಾಗಿ ಒಬ್ಬ ಗುರುಗಳು ಹೇಳಿರುವುದು ಮತ್ತೊಬ್ಬರು ಹೇಳಿರುವುದಕ್ಕಿಂತ ಭಿನ್ನವಾಗಿ ಇರುವುದಿಲ್ಲ. ಯಾವ ಲೋಕದಲ್ಲಾದರೂ, ಯಾವ ಕಾಲದಲ್ಲಾದರೂ ಶಾಸ್ತ್ರಜ್ಞಾನ ಎಂಬುದು ಒಂದೇ ಆಗಿರುತ್ತದೆ. ಏಕಂ ಸತ್! ಎಂದಿದ್ದಾರೆ ಅಲ್ಲವೇ?

ಆದ್ದರಿಂದ ದುಃಖ ನಿವಾರಣೆಗೆ ಸಮಸ್ತ ಯೋಗಿಗಳು ತಿಳಿಸಿರುವುದು ಒಂದೇ ಎಂದು ಅರಿಯಬೇಕು. ಅವರೆಲ್ಲರೂ ತೋರಿಸಿರುವುದು ಒಂದೇ ಮಾರ್ಗ... ಅದೇ "ಸತ್ಯ ಮಾರ್ಗ" ಅಂದರೆ "ಬ್ರಹ್ಮ ಮಾರ್ಗ" ಎಂದು ಅರಿತು ಉಸಿರಾಟದ ಮೇಲೆ ಗಮನವನ್ನು ಹರಿಸಿ ಧ್ಯಾನ ಮಾಡಿದರೆ ತಾತ್ಕಾಲಿಕವಾಗಿ ಮಾತ್ರವಲ್ಲದೆ ಶಾಶ್ವತವಾಗಿಯೂ ಸಹ ದುಃಖದಿಂದ ಹೊರಬರಬಹುದು.

ಯೋಗಿಗಳು ತಿಳಿಸಿರುವ ಮೇಲಿನ ವಿಷಯಗಳ ಬಗ್ಗೆ ಗಮನವನ್ನು ಹರಿಸಿದರೆ ಮಾನವರ ದುಃಖಗಳಿಗೆ ಕಾರಣ ಮನಸ್ಸಿನಲ್ಲಿಯೇ ಇದೆ ಎಂದು ತಿಳಿಯುತ್ತದೆ. ಮನಸ್ಸಿದ್ದರೆ ದುಃಖ, ಮನಸ್ಸನ್ನು ಜಯಿಸಿ ಶೂನ್ಯವಾಗಿಸಿದರೆ "ಆತ್ಮ ಸ್ಥಿತಿ" ಅಂದರೆ "ಬ್ರಹ್ಮ ಸ್ಥಿತಿ". ಇದನ್ನು ಪಡೆದರೆ ಮುಕ್ತಿ ಎಂದು ತಿಳಿಯುತ್ತದೆ.

ಈ ರೀತಿ ವಿಶೇಷವಾಗಿ ಧ್ಯಾನ ಸಾಧನೆಯನ್ನು ಮಾಡುವುದರ ಮೂಲಕ ಜ್ಞಾನ ನೇತ್ರವನ್ನು ಪಡೆಯಬಹುದು. ಬ್ರಹ್ಮಾನುಭೂತಿಯನ್ನು ಪಡೆಯಬಹುದು. ಆದ್ದರಿಂದ ಪರಮೇಶ್ವರನು ಬೋಧಿಸಿರುವ ಪ್ರಕಾರ ನಾಮರೂಪಗಳನ್ನು ಬಿಟ್ಟು ಬ್ರಹ್ಮರ್ಷಿ ಪತ್ರೀಜಿ ಬೋಧಿಸುವ 'ಉಸಿರಾಟದ ಮೇಲೆ ಗಮನ' ಧ್ಯಾನದ ಮೂಲಕ ಜೀವನವನ್ನು ಸಾರ್ಥಕವಾಗಿಸಿಕೊಳ್ಳೋಣ.

ಇಲ್ಲಿಯವರೆಗೂ ನಾವು ಬ್ರಹ್ಮನನ್ನು ಪಡೆಯುವ ಮಾರ್ಗವನ್ನು ತಿಳಿದುಕೊಂಡಿದ್ದೇವೆ. ಈಗ ಈ ಮಾರ್ಗದ ಮೂಲಕ ಬ್ರಹ್ಮನನ್ನು ಪಡೆದರೆ ಹೊಂದುವ ಫಲಿತಾಂಶಗಳನ್ನು ಸಹ ತಿಳಿದುಕೊಳ್ಳೋಣ.

# 'ಬ್ರಹ್ಮನನ್ನು ಪಡೆದರೆ ಉಂಟಾಗುವ ಲಾಭಗಳು

"ಕ್ಷಿಯನ್ತೇ ಚಾಪ್ಯ ಕರ್ಮಾಣಿ ಅಸ್ಮಿನ್ ದೃಷ್ಟಾ ಪರಾವರೇ!"

ತಾತ್ಪರ್ಯ: ಬ್ರಹ್ಮ ಅಂದರೆ ಆತ್ಮ ಸಾಕ್ಷಾತ್ಕಾರವನ್ನು ಪಡೆದ ಉಪಾಸಕರ, ಸಾಧಕರ ಆಗಾಮಿ, ಸಂಚಿತ, ಪ್ರಾರಬ್ಧ ಕರ್ಮಗಳು ನಾಶವಾಗುತ್ತದೆ.

ಧ್ಯಾನದ ಮೂಲಕ ಬ್ರಹ್ಮನನ್ನು ಪಡೆಯುವ ಪ್ರಯತ್ನ ಮಾಡಿದರೆ ಲಭಿಸುವ ಬಹುದೊಡ್ಡ ಫಲಿತಾಂಶಗಳನ್ನು ಉತ್ತರ ಗೀತೆಯಲ್ಲಿ ಶ್ರೀ ಕೃಷ್ಣ ಪರಮಾತ್ಮ ತಿಳಿಸಿದ್ದಾರೆ.

**ಶ್ಲೋಕ: ನಿಮಿಷಂ ನಿಮಿಷಾರ್ಥಂ ವಾಜ್ಞಾನಿನೊ ಧ್ಯಾನ ಚಿಂತಿಯಾ।**

**ಕ್ರತುಕೋಟಿ ಸಹಸ್ರಾಣಂ ಧ್ಯಾನಮೇಕ ವಿಶಿಷ್ಯತೆ॥**

ತಾತ್ಪರ್ಯ: ಒಂದು ನಿಮಿಷವಾಗಲಿ, ಅರ್ಧ ನಿಮಿಷವಾಗಲಿ ಧ್ಯಾನದಲ್ಲಿ ಬ್ರಹ್ಮನ ಮೇಲೆ ದೃಷ್ಟಿಯನ್ನು ಕೇಂದ್ರೀಕರಿಸಿದವರಿಗೆ ಸಾವಿರ ಕೋಟಿ ಕ್ರತುಗಳನ್ನು (ಯಾಗಗಳನ್ನು) ಮಾಡಿದ ಫಲಿತಾಂಶ ಲಭಿಸುತ್ತದೆ ಎಂದು ತಿಳಿಸಿದ್ದಾರೆ.

ಅಂದರೆ ಧ್ಯಾನದಲ್ಲಿ ಮನಸ್ಸನ್ನು ದಾಟಿ ಆತ್ಮದ ಮೇಲೆ ಅಂದರೆ ಬ್ರಹ್ಮನ ಮೇಲೆ ದೃಷ್ಟಿಯನ್ನು ಕೇಂದ್ರೀಕರಿಸಿದರೆ ಎಂತಹ ದೊಡ್ಡ ಫಲಿತಾಂಶ ಲಭಿಸುತ್ತದೆ ಎಂಬುದನ್ನು ಮೇಲಿನ ಶ್ಲೋಕದ ಮೂಲಕ ತಿಳಿಸಿದ್ದಾರೆ.

ಇದರಿಂದಾಗಿ ಧ್ಯಾನ ಮಾಡುವ ಧ್ಯಾನಯೋಗಿಗಳು ಎಷ್ಟು ಉತ್ತಮರು ಎಂದು ಅರ್ಥ ಮಾಡಿಕೊಳ್ಳಬಹುದು. ಈ ವಿಷಯವನ್ನು ಭಗವದ್ಗೀತೆಯಲ್ಲಿಯು ಸಹ ತಿಳಿಸಿದ್ದಾರೆ.

ಕೃಷ್ಣನಂತಹ ಪರಮಾತ್ಮನು ತಿಳಿಸಿರುವ ವಿಷಯ ಬಹಳ ಉತ್ತಮವಾಗಿರುತ್ತದೆ ಅಲ್ಲವೇ? ಅದನ್ನು ಆಚರಿಸಿದವರು ಎಷ್ಟು ಮಹಾತ್ಮರಾಗುತ್ತಾರೆ ಅಲ್ಲವೇ? ಎಂತಹ ಉತ್ತಮವಾದ ಲಾಭಗಳನ್ನು ಪಡೆಯಬಲ್ಲರು ಎಂಬುದನ್ನು ಈ ಕೆಳಗಿನ ಶ್ಲೋಕಗಳ

ಮೂಲಕ ನೋಡೋಣ. ಗೀತೆಯಲ್ಲಿ ಶ್ರೀಕೃಷ್ಣ ಪರಮಾತ್ಮನು ಅರ್ಜುನನನ್ನು ಏನು ಆಗಬೇಕೆಂದು ತಿಳಿಸಿದರು ಎಂಬುದನ್ನು ನೋಡೋಣ.

**ಶ್ಲೋಕ: ತಪಸ್ವಿಭ್ಯೋಽಧಿಕೊ ಯೋಗಿ ಜ್ಞಾನಿಭ್ಯೋಽಪಿ ಮತೋಽಧಿಕಃ**

**ಕರ್ಮಿಭ್ಯಶ್ಚಾಧಿಕೊ ಯೋಗಿ ತಸ್ಮಾದ್ಯೋಗಿ ಭವಾರ್ಜುನ (ಭ.ಗೀ. 6–46)**

ತಾತ್ಪರ್ಯ: ಅರ್ಜುನಾ! ಯೋಗಿ ಆದವನು ತಪಸ್ಸುಗಳನ್ನು ಮಾಡುವವರಿಗಿಂತಲೂ, ಶಾಸ್ತ್ರ ಜ್ಞಾನವನ್ನು ಹೊಂದಿರುವವರಿಗಿಂತಲೂ, ಅಗ್ನಿಹೋತ್ರಾದಿ ಕರ್ಮಗಳನ್ನು ಮಾಡುವವರಿಗಿಂತಲೂ ಸಹ ಶ್ರೇಷ್ಠನು. ಆದುದರಿಂದ ನೀನು ಯೋಗಿಯಾಗು.

ಮೇಲಿನ ಶ್ಲೋಕದ ಮೂಲಕ ತಪಸ್ಸು ಮಾಡುವವರು ಅಂದರೆ ಶರೀರವನ್ನು ಬಳಲುವಂತೆ ಮಾಡಿಕೊಳ್ಳುವವರು ಅಂದರೆ ಬಿಸಿಲಿನಲ್ಲಿ ನಿಂತುಕೊಳ್ಳುವುದು, ಒಂದು ಕಾಲಿನ ಮೇಲ್ ನಿಂತುಕೊಳ್ಳುವುದು, ಎರಡು ಕಾಲುಗಳನ್ನು ಮೇಲಕ್ಕೆ ಎತ್ತುವುದು, ಹಠಯೋಗದ ಮೂಲಕ ಕಠಿಣವಾದ ಭಂಗಿಗಳನ್ನು ಮಾಡುವುದು, ಅನ್ನ ಪಾನಾದಿಗಳನ್ನು ತ್ಯಜಿಸುವುದು, ಉಪವಾಸ ದಂತಹುದನ್ನು ಮಾಡಿ ಶರೀರವನ್ನು ಬಳಲುವಂತೆ ಮಾಡುವವರಿಗಿಂತ ಯೋಗಿಯಾದವನು ಮಹಾತ್ಮನು ಎಂಬುದನ್ನು ತಿಳಿದುಕೊಳ್ಳಬಹುದು.

ಹಾಗೆ ಶಾಸ್ತ್ರ ಜ್ಞಾನವನ್ನು ಹೊಂದಿರುವವರು ಅಂದರೆ ಪುಸ್ತಕ ಜ್ಞಾನ, ಪಂಡಿತ ಜ್ಞಾನ ಅಂದರೆ ಪುಸ್ತಕಗಳನ್ನು ನೋಡಿ ನಿರರ್ಗಳವಾಗಿ ಉಪನ್ಯಾಸಗಳನ್ನು ಮಾಡುವ ಪಂಡಿತರಿಗಿಂತ, ಶಾಸ್ತ್ರಗಳನ್ನು ಅಧ್ಯಯನ ಮಾಡಿರುವವರಿಗಿಂತ ಯೋಗಿ ಉತ್ತಮನು ಎಂದು ತಿಳಿದುಕೊಳ್ಳಬಹುದು.

ಹಾಗೆ ಕರ್ಮಗಳನ್ನು ಮಾಡುವವರು ಅಂದರೆ ನಿತ್ಯ ನೈಮಿತ್ತಿಕ ಕರ್ಮಗಳು ಅಂದರೆ ಸಂಧ್ಯಾವಂದನೆ, ಸೂರ್ಯ ನಮಸ್ಕಾರಗಳು, ಗಾಯತ್ರಿ ಮಂತ್ರದಂತಹ ನಿತ್ಯ ಅನುಷ್ಠಾನಗಳು ಹಾಗೆ ಯಜ್ಞ ಯಾಗಾದಿ ಕರ್ಮಗಳನ್ನು ಮಾಡುವವರಿಗಿಂತ ಯೋಗ ಮಾಡುವ ಯೋಗಿ ಉತ್ತಮನು. ಆದ್ದರಿಂದ ಅರ್ಜುನ ಯೋಗಿಯಾಗೂ ಎಂದು ಶ್ರೀಕೃಷ್ಣ ಪರಮಾತ್ಮನು ತಿಳಿಸಿದ್ದಾರೆ. ಹಾಗಿದ್ದರೆ ಯಾರು ಯೋಗಿ ? ಯಾವುದನ್ನು ಯೋಗ ಎನ್ನುತ್ತಾರೆ?

ಯೋಗಶಾಸ್ತ್ರಕ್ಕೆ ಮೂಲಪುರುಷನಾದ ಪತಂಜಲಿ ಮಹರ್ಷಿ "ಯೋಗಃ ಚಿತ್ತವೃತ್ತಿ

ನಿರೋಧಃ" ಎಂದು ಯೋಗಕ್ಕೆ ವ್ಯಾಖ್ಯಾನವನ್ನು ನೀಡಿದ್ದಾರೆ. ಅಂದರೆ ಚಿತ್ತವೃತ್ತಿಗಳನ್ನು ತಡೆಯುವುದೇ ಯೋಗ ಎಂದು ಕರೆಯಲ್ಪಡುತ್ತದೆ. ಮನಸ್ಸಿನ ವೃತ್ತಿಗಳು ಅಂದರೆ ಆಲೋಚನೆಗಳು... ಮನಸ್ಸಿನಲ್ಲಿನ ಆಲೋಚನೆಗಳನ್ನು ತಡೆಯುವುದೇ ಯೋಗ. ಆಲೋಚನೆ ಇಲ್ಲದ ಸ್ಥಿತಿಯಲ್ಲಿ ಇರುವುದೇ ಯೋಗ ಎನ್ನುತ್ತಾರೆ. ಆ ಸ್ಥಿತಿಯಲ್ಲಿ ಇರುವವರನ್ನು ಯೋಗಿ ಎಂದು ಕರೆಯುತ್ತಾರೆ.

ಹೀಗೆ ಆಲೋಚನೆ ಇಲ್ಲದ ಯೋಗ ಸ್ಥಿತಿಯಲ್ಲಿ ಇರಲು, ಅಂತಹ ಸ್ಥಿತಿಯನ್ನು ಸಾಧಿಸಲು ಬ್ರಹ್ಮರ್ಷಿ ಪತ್ರೀಜಿ ಸುಲಭವಾದ ಮಾರ್ಗ ಎಂದರೆ "ಉಸಿರಾಟದ ಮೇಲೆ ಗಮನ "ಧ್ಯಾನ" ಎಂದು ನಮಗೆ ತಿಳಿಸಿದ್ದಾರೆ. ಯಾರಾದರೂ ಸರಿ ಉಸಿರಾಟದ ಮೇಲೆ ಗಮನವನ್ನು ಕೇಂದ್ರೀಕರಿಸಿ ಧ್ಯಾನ ಮಾಡಿದರೆ ಅವರು ಶೀಘ್ರವಾಗಿ ಆಲೋಚನೆಗಳನ್ನು ತಡೆದು ಮನಸ್ಸಿಲ್ಲದ ಸ್ಥಿತಿಯಲ್ಲಿ ಅಂದರೆ ಆತ್ಮ ಸ್ಥಿತಿಯಲ್ಲಿ ಇರುತ್ತಾರೆ. ಈ ರೀತಿ ಆತ್ಮದೊಂದಿಗೆ ಕೂಡಿ ಇರುವುದೇ ಯೋಗ ಎಂದು ಕರೆಯಲ್ಪಡುತ್ತದೆ. ಆತ್ಮ ಎಂದರೆ ಬ್ರಹ್ಮ, ಅಂದರೆ ಭಗವಂತ ಅಲ್ಲವೇ... ಭಗವಂತನೊಂದಿಗೆ ಕೂಡಿರುವುದೆ ಯೋಗವಾಗುತ್ತದೆ. ಆ ರೀತಿ ಇರುವವರನ್ನು ಯೋಗಿ ಎಂದು ಕರೆಯುತ್ತಾರೆ.

ಆದುದರಿಂದ ಭಗವಂತನನ್ನು ಬಾಯಿಯಿಂದ ಪ್ರಾರ್ಥಿಸುವವರಿಗಿಂತ, ಆತನ ನಾಮವನ್ನು ಮನಸ್ಸಿನಲ್ಲಿ ಸ್ಮರಿಸುವವರಿಗಿಂತ, ಕೋರಿಕೆಗಳಿಂದ ಆತನ ಬಗ್ಗೆ ಪ್ರಾರ್ಥನೆ ಮಾಡುವವರಿಗಿಂತ, ಆತನ ಬಗ್ಗೆ ತಿಳಿಸುವವರಿಗಿಂತ, ಯಜ್ಞ ಯಾಗಾದಿ ಕರ್ಮಗಳನ್ನು ಮಾಡುವವರಿಗಿಂತ, ಮನಸ್ಸು ಇಲ್ಲದ ಸ್ಥಿತಿಯಲ್ಲಿ ಭಗವಂತನೊಂದಿಗೆ ಇರುವ ಯೋಗಿ ಬಹಳ ಬಹಳ ಉತ್ತಮನು ಎಂದು ಶ್ರೀ ಕೃಷ್ಣ ಪರಮಾತ್ಮರು ತಿಳಿಸಿದ್ದಾರೆ.

**ಶ್ಲೋಕ:ಯೋನ್ತಃ ಸುಖೋ ನ್ತರಾರಾಮ ಸ್ತಥಾನ್ತರ್ಜ್ಯೋತಿರೇವ ಯಃ**

**ಸಯೋಗಿ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ॥ (ಭ.ಗಿ– 5–24)**

ತಾತ್ಪರ್ಯ: ಯಾರು ತನ್ನಲ್ಲಿರುವ ಆತ್ಮದೊಂದಿಗೆ ಸುಖಿಸುತ್ತಾ... ಆತ್ಮದೊಂದಿಗೆ ರಮಿಸುತ್ತಾ... ಆತ್ಮದಲ್ಲಿಯೇ ಇರುತ್ತಾನೋ... ಅಂತಹ ಯೋಗಿ ಬ್ರಹ್ಮಸ್ವರೂಪನಾಗಿ ಬ್ರಹ್ಮ ಸಾಕ್ಷಾತ್ಕಾರವನ್ನು ಪಡೆಯುತ್ತಾನೆ.

ಅಂದರೆ ಧ್ಯಾನದ ಮೂಲಕ ಯಾರು ಮನಸ್ಸಿಲ್ಲದ ಸ್ಥಿತಿಯಲ್ಲಿ ಆತ್ಮದೊಂದಿಗೆ ಅಂದರೆ ಭಗವಂತನೊಂದಿಗೆ ಇರುತ್ತಾರೊ... ಅವರು ಕಟ್ಟ ಕಡೆಗೆ ಭಗವಂತನನ್ನು ಪಡೆಯುತ್ತಾರೆ, ಮೋಕ್ಷವನ್ನು ಪಡೆಯುತ್ತಾರೆಂದು ಈ ಶ್ಲೋಕದ ಮೂಲಕ ಶ್ರೀ ಕೃಷ್ಣ ಪರಮಾತ್ಮನು

ತಿಳಿಸಿದ್ದಾರೆ. ಧ್ಯಾನ ಮಾಡಿದರೆ ಭಗವಂತನನ್ನು ಪಡೆಯಬಲ್ಲರೆ ಹೊರತು ಬೇರೆ ಯಾವ ಸಾಧನೆಯನ್ನು ಮಾಡಿದರು ಭಗವಂತನನ್ನು ಪಡೆಯಲು ಸಾಧ್ಯವಿಲ್ಲ. ಆದುದರಿಂದ ಬೇರೆ ಎಲ್ಲಾ ರೀತಿಯ ಸಾಧನೆಗಳನ್ನು ಮಾಡುವವರಿಗಿಂತ ಧ್ಯಾನಯೋಗಿ ಅಂದರೆ ಧ್ಯಾನ ಮಾಡುವವರೇ ಉತ್ತಮರೆಂದು ಶ್ರೀ ಕೃಷ್ಣ ಪರಮಾತ್ಮರು ತಿಳಿಸಿದ್ದಾರೆ.

ಧ್ಯಾನ ಉತ್ತಮವಾದುದು. ಆದ್ದರಿಂದ ಧ್ಯಾನದ ಮೂಲಕ ಮೋಕ್ಷವನ್ನು ಪಡೆಯಬಹುದು. ಎಲ್ಲರೂ ಧ್ಯಾನಯೋಗಿಗಳಾಗಿ ಎಂದು ಶ್ರೀ ಕೃಷ್ಣ ಪರಮಾತ್ಮರು ತಿಳಿಸಿದ್ದಾರೆ ಹೊರತು ಬಿರ್ಲಾ, ಅಂಬಾನಿ ಆಗಿ ಎಂದು, ಪದವಿಗಳನ್ನು ಸಂಪಾದಿಸಿ ಎಂದು ಎಲ್ಲಿಯೂ ಸಹ ತಿಳಿಸಿಲ್ಲ. ಇದನ್ನು ಪ್ರತಿಯೊಬ್ಬರು ಅರ್ಥಮಾಡಿಕೊಳ್ಳಬೇಕು.

ಅಷ್ಟೇ ಅಲ್ಲದೆ, ಆ ರೀತಿ ಯೋಗಿಯಾಗಲು ಧ್ಯಾನ ಸಾಧನೆಯ ಮೂಲಕ ಪ್ರಯತ್ನಿಸಿದವರು... ಯೋಗಿ ಆಗದೆ ಇದ್ದರೂ ಎಂತಹ ಲಾಭಗಳನ್ನು ಪಡೆಯುತ್ತಾರೆ, ಧ್ಯಾನದಿಂದ ಅವರಿಗೆ ಭವಿಷ್ಯತ್ತಿನಲ್ಲಿ ಯಾವ ರೀತಿಯ ಲಾಭಗಳು ಉಂಟಾಗುತ್ತವೆ ಎಂಬುದನ್ನು ಶ್ರೀ ಕೃಷ್ಣ ಪರಮಾತ್ಮನು ತಿಳಿಸಿದ್ದಾರೆ. ಏಕೆಂದರೆ ಧ್ಯಾನದಲ್ಲಿ ಆಲೋಚನೆಗಳಿಲ್ಲದ ಸ್ಥಿತಿ ಅಂದರೆ ಮನಸ್ಸನ್ನು ನಿಗ್ರಹಿಸುವ ಸ್ಥಿತಿ, ಶೂನ್ಯವಾಗಿಸುವ ಸ್ಥಿತಿಯನ್ನು ಸಾಧಿಸುವುದು ಬಹಳ ಕಷ್ಟ. ಇದೇ ವಿಷಯವನ್ನು ಅರ್ಜುನ ಶ್ರೀ ಕೃಷ್ಣ ಪರಮಾತ್ಮನನ್ನು ಕೇಳಿದಾಗ.. ನಾನು ಅಂದುಕೊಂಡಿದ್ದು ಸಾಧಿಸಲು ಸಾಧ್ಯವಾಗದೆ ಹೋದರೆ... ಅಂದರೆ ಧ್ಯಾನವನ್ನು ಪ್ರಾರಂಭಿಸಿ ಆತ್ಮವನ್ನು ಪಡೆಯಲು ಆಗದಿದ್ದರೆ ನನ್ನ ಪರಿಸ್ಥಿತಿ ಏನು? ಏನು ಮಾಡದೆ ಹೋದರೆ ಇಹಲೋಕದಲ್ಲಿ... ಸಾಧನೆ ಪೂರ್ತಿ ಮಾಡಲು ಸಾಧ್ಯವಾಗದೇ ಹೋದರೆ ಪರಲೋಕದಲ್ಲಿ ನಷ್ಟವಾಗಿ ಕೊನೆಗೆ ಎರಡು ದೋಣಿಯ ಮೇಲೆ ಸವಾರಿ ಮಾಡಿದಂತೆ ಆಗುತ್ತೇನೆ ಎಂದು ಅರ್ಜುನನಿಗೆ ಸಂದೇಹವು ಮೂಡಿತು. ಈ ವಿಷಯವನ್ನು ಈ ಕೆಳಗಿನ ಶ್ಲೋಕದ ಮೂಲಕ ಅರ್ಜುನನು ಶ್ರೀ ಕೃಷ್ಣನನ್ನು ಕೇಳಿದನು.



**ಶ್ಲೋಕ: ಕಚ್ಚಿನ್ನೋಽಭಯವಿಭ್ರಷ್ಟ ಶ್ಛಿನ್ನಾಭ್ರಮಿವ ನಶ್ಯತಿ**
**ಅಪ್ರತಿಷ್ಠೋ ಮಹಾಬಾಹೊ ವಿಮೂಢೋ ಬ್ರಹ್ಮಣಃ ಪಥಿ (ಭ.ಗೀ – 6–38)**

**ತಾತ್ಪರ್ಯ:** ಕೃಷ್ಣಾ! ಬ್ರಹ್ಮ ಮಾರ್ಗದಲ್ಲಿ (ಯೋಗ ಮಾರ್ಗದಲ್ಲಿ) ಸ್ಥಿರತೆ ಇಲ್ಲದ ಮೂಢನು ಇಹಪರ ಎರಡರಲ್ಲಿಯೂ ಹಾಳಾಗಿ ಚದರಿದ ಮೋಡದಂತೆ ನಾಶವಾಗುವುದಿಲ್ಲವೇ?

ಅಂದರೆ ಇಹದಲ್ಲಿ ಹಣ ಸಂಪಾದನೆಯನ್ನು ಬಿಟ್ಟು ಧ್ಯಾನ ಮಾಡುತ್ತಾ ಕುಳಿತರೆ ಇಹಲೋಕದಲ್ಲಿ ಪಡೆಯುವ ಸುಖಗಳನ್ನು ಪಡೆಯಲಾರದೆ, ಹಾಗೆ ಯೋಗ ಸಾಧನೆಯನ್ನು ಪೂರ್ತಿ ಮಾಡದೇ ಇರುವುದರಿಂದ ಪರದಲ್ಲಿ ಹೊಂದುವ ಲಾಭಗಳು ಅಂದರೆ ಮೋಕ್ಷವನ್ನು ಪಡೆಯದೆ ಎರಡರಲ್ಲಿಯೂ ಸಾಧಿಸಲು ಸಾಧ್ಯವಾಗದೆ ಹಾನಿಗೆ ಒಳಗಾಗುತ್ತಾನಲ್ಲವೇ ಎಂಬ ಸಂದೇಹವನ್ನು ಅರ್ಜುನನು ವ್ಯಕ್ತಪಡಿಸಿದನು. ಅಂದರೆ ಧ್ಯಾನವನ್ನು ಪೂರ್ತಿ ಮಾಡದೆ ಯೋಗಾಭ್ಯಾಸ ಮಾಡುತ್ತಾ ಮಧ್ಯದಲ್ಲಿಯೇ ಶರೀರವನ್ನು ತ್ಯಜಿಸಿದವರ ಪರಿಸ್ಥಿತಿ ಏನು? ಎಂದು ಶ್ರೀ ಕೃಷ್ಣ ಭಗವಾನನನ್ನು ಪ್ರಶ್ನಿಸಲಾಯಿತು. ಅದಕ್ಕೆ ಶ್ರೀ ಕೃಷ್ಣ ಪರಮಾತ್ಮ...

**ಶ್ಲೋಕ: ಪ್ರಾಪ್ಯ ಪುಣ್ಯಕೃತಾಂ ಲೋಕಾನುಷಿತ್ವಾ ಶಾಶ್ವತಿಃ ಸಮಾಃ**
**ಶುಚಿನಾಂ ಶ್ರೀಮತಾಂ ಗೇಹೆ ಯೋಗಭ್ರಷ್ಟೋಭಿಜಾಯತೆ (ಭ.ಗಿ – 6–41)**

**ತಾತ್ಪರ್ಯ:** ಅಂತಹ ಯೋಗಭ್ರಷ್ಟನು (ಮರಣದ ನಂತರ) ಪುಣ್ಯ ಆತ್ಮಗಳ ಲೋಕವನ್ನು ತಲುಪಿ, ಅಲ್ಲಿ ಹಲವಾರು ವರ್ಷಗಳು ವಾಸಿಸಿ, ತದನಂತರ ಸದಾಚಾರ ವರ್ತನೆಯನ್ನು ಹೊಂದಿರುವ ಶ್ರೀಮಂತರ ಮನೆಯಲ್ಲಿ ಜನಿಸುತ್ತಾನೆ.

**ಶ್ಲೋಕ: ಅಥವಾ ಯೋಗಿನಾಮೇವ ಕುಲೆ ಭವತಿ ಧಿಮತಾಮ್**
**ಏತದ್ಧಿ ದುರ್ಲಭತರಂ ಲೋಕೆ ಜನ್ಮ ಯದಿದೃಶಮ್ (ಭ.ಗಿ – 6–42)**

**ತಾತ್ಪರ್ಯ:** ಅಥವಾ ಜ್ಞಾನವಂತನಂತೆ ಯೋಗಿಗಳ ವಂಶದಲ್ಲಿ ಜನಿಸುತ್ತಾನೆ. ಅಂತಹ ಜನ್ಮ ಲಭಿಸುವುದು ಈ ಲೋಕದಲ್ಲಿ ಬಹಳ ದುರ್ಲಭ.

ಇಲ್ಲಿ ನಾವು ಸ್ವಲ್ಪ ಯೋಚಿಸಬೇಕು. ಹೊರನೋಟಕ್ಕೆ ಧ್ಯಾನ ಮಾಡುವವರಿಗೆ ಯಾವ ಲಾಭಗಳು ಕಾಣಿಸುವುದಿಲ್ಲ. ಅವರಿಗೆ ಧನಸಂಪಾದನೆ ಹೆಚ್ಚು

ಇರುವುದಿಲ್ಲ. ಅಷ್ಟೇ ಅಲ್ಲದೆ ಸಾಮಾನ್ಯವಾಗಿ ಹಣ ಕಡಿಮೆ ಇರುವವರೇ ಧ್ಯಾನ ಮಾಡುತ್ತಾರೆ. ಅವರನ್ನು ನೋಡಿ ಉಳಿದವರು... ಇವರು ಏನು ಮಾಡದೆ! ಏನೂ ಸಂಪಾದಿಸದೆ! ಏನು ಅನುಭವಿಸದೆ! ಹಾಗೆ ಯಾವಾಗಲೂ ಧ್ಯಾನ ಮಾಡುತ್ತಾ ಕುಳಿತಿರುತ್ತಾರೆ. ಇವರು ಬಹಳ ಮಂದ ಬುದ್ಧಿ ಅವರಂತೆ ಇದ್ದಾರೆ ಎಂದು ಧ್ಯಾನ ಮಾಡುವವರನ್ನು ನೋಡಿ ಬಹಳಷ್ಟು ಜನ ಭಾವಿಸುತ್ತಾರೆ, ಅದನ್ನೇ ಮಾತನಾಡುತ್ತಾರೆ.

ಆದರೆ, ಧ್ಯಾನ ಮಾಡುವವರು ಬಹಳ ಉತ್ತಮರು. ಅವರು ಪರದಲ್ಲಿ ಬಹಳ ಉತ್ತಮವಾದ ಲೋಕಗಳನ್ನು ತಲುಪುತ್ತಾರೆ. ಮತ್ತೆ ಅವರಿಗೆ ಬಹಳ ಉನ್ನತವಾದ ಜನ್ಮ ಲಭಿಸುತ್ತದೆ ಎಂದು ಮೇಲಿನ ಶ್ಲೋಕಗಳ ಮೂಲಕ ಶ್ರೀ ಕೃಷ್ಣ ಪರಮಾತ್ಮನು ತಿಳಿಸಿದ್ದಾರೆ. ಅವರು ಹೇಳಿದ ಪ್ರಕಾರ ಮುಂದಿನ ಜನ್ಮದಲ್ಲಿ ಅಪ್ರಯತ್ನವಾಗಿಯೇ ಶ್ರೀಮಂತರ ಮನೆಯಲ್ಲಿ ಜನಿಸುತ್ತಾರೆ. ದೊಡ್ಡ ಜ್ಞಾನಿಗಳಂತೆ ಯೋಗಿಗಳ ಮನೆಯಲ್ಲಿ ಜನಿಸುತ್ತಾರೆ. ಅಂತಹ ಜನ್ಮ ಲಭಿಸುವುದು ಬಹಳ ದುರ್ಲಭ ಎಂದು ಅವರು ತಿಳಿಸಿದ್ದಾರೆ. ಆದುದರಿಂದಲೇ, ಅವರು ಎಲ್ಲರಿಗಿಂತ ಯೋಗಿ ಉತ್ತಮನು ಎಂದು ತಿಳಿಸಿದ್ದಾರೆ. ಯಜ್ಞ ಯಾಗಾದಿ ಕರ್ಮಗಳನ್ನು ಮಾಡುವವರಿಗಿಂತಲೂ ಸಹ ಯೋಗಿ ಉತ್ತಮನು ಎಂದು ತಿಳಿಸಲು ಕಾರಣವು ಸಹ ಇದೆ.

ಇದರ ಅನುಸಾರವಾಗಿ ಧ್ಯಾನ ಮಾಡುವ ಯೋಗಿ ಬಹಳ ಉತ್ತಮನು, ಬಹಳ ಅದೃಷ್ಟವಂತನು ಎಂದರ್ಥ. ಪ್ರಸ್ತುತ ಧ್ಯಾನ ಮಾಡುವವರು ಬಹಳ ಸಾಮಾನ್ಯರಂತೆ ಕಾಣಿಸಬಹುದು, ಲೋಕದ ಜನರ ದೃಷ್ಟಿಯಲ್ಲಿ ಸಾಮಾನ್ಯನಾಗಿರಬಹುದು. ಆದರೆ, ಎಲ್ಲರಿಗಿಂತ ಅವರೇ ಉತ್ತಮರು ಎಂದು ಶ್ರೀ ಕೃಷ್ಣ ಪರಮಾತ್ಮನು ಹೇಳಿರುವುದರಿಂದ ನಾವು ಅದನ್ನು ಅರ್ಥಮಾಡಿಕೊಳ್ಳಬಹುದು. ಪ್ರಸ್ತುತ ಕೆಲವು ಜನ ಧನಿಕರಾಗಿ ಇರಬಹುದು. ಆದರೆ ಆ ಹಣ ಮರಣದ ನಂತರ ಪರಕ್ಕೆ ಆಗಲಿ ಮತ್ತೊಂದು ಜನ್ಮಕ್ಕೆ ಆಗಲಿ ತೆಗೆದುಕೊಂಡು ಹೋಗಲು ಸಾಧ್ಯವಿಲ್ಲ. ಅಷ್ಟೇ ಅಲ್ಲದೇ, ಮುಂದಿನ ಜನ್ಮ ಹೇಗಿರುತ್ತೆ? ಎಂಬುದು ಸಹ ಗೊತ್ತಿಲ್ಲ. ಆದರೆ ಧ್ಯಾನ ಮಾಡುವವರು ಪರದಲ್ಲಿ ಪುಣ್ಯ ಲೋಕಗಳನ್ನು ಹೊಂದುವುದರ ಜೊತೆಗೆ ಮತ್ತೊಂದು ಜನ್ಮದಲ್ಲಿ

ಶ್ರೀಮಂತರಂತೆ ಆಗಲಿ ಅಥವಾ ದೊಡ್ಡ ಯೋಗಿಗಳಂತೆ ಆಗಲಿ ಜನಿಸುತ್ತಾರೆ. ಅಷ್ಟೇ ಅಲ್ಲದೇ, ಅಂತಹ ಜನ್ಮಗಳನ್ನು ಪಡೆದವರು ತದನಂತರ ಸಾಧನೆಯನ್ನು ಪೂರ್ತಿ ಮಾಡಿ ಮೋಕ್ಷವನ್ನು ಸಹ ಪಡೆಯುತ್ತಾರೆಂದು ಶ್ರೀ ಕೃಷ್ಣ ಪರಮಾತ್ಮನು ತಿಳಿಸಿದ್ದಾರೆ.

ಈ ಕೆಳಗಿನ ಶ್ಲೋಕವನ್ನು ನೋಡೋಣ

**ಶ್ಲೋಕ: ಪ್ರಯತ್ನಾದ್ಯತಮಾನಸ್ತು ಯೋಗಿ ಸಂಶುದ್ಧಕಿಲ್ಬಿಷಃ**
**ಅನೇಕಜನ್ಮಸಂಸಿದ್ಧಸ್ತತೊ ಯಾತಿ ಪರಾಂ ಗತಿಮ್ (ಭ.ಗಿ– 6–45)**

**ತಾತ್ಪರ್ಯ:** ಆ ರೀತಿ ಪ್ರಯತ್ನಿಸಿದ ಯೋಗಿ ಪಾಪರಹಿತನಾಗಿ ಅನೇಕ ಜನ್ಮಗಳಿಂದ ಮಾಡಲ್ಪಟ್ಟ ಅಭ್ಯಾಸದಿಂದ ಯೋಗಸಿದ್ಧಿಯನ್ನು ಪಡೆದು ತದನಂತರ ಸರ್ವೋತ್ತಮವಾದ ಮೋಕ್ಷವನ್ನು ಪಡೆಯುತ್ತಾನೆ.

ಆ ರೀತಿ ಧ್ಯಾನ ಮಾಡುವ ಯೋಗಿ ಉನ್ನತವಾದ ಜನ್ಮಗಳನ್ನು ಪಡೆಯುವುದರ ಜೊತೆಗೆ ಕಡೆಗೆ ಮೋಕ್ಷವನ್ನು ಸಹ ಪಡೆಯಬಲ್ಲನಾದುದರಿಂದ ಅರ್ಜುನನಿಗೆ ಯೋಗಿಯಾಗು ಎಂದು ಶ್ರೀ ಕೃಷ್ಣ ಪರಮಾತ್ಮನು ತಿಳಿಸಿರುವುದು.

ಅರ್ಜುನನಿಗೆ ಹೇಳಿದ್ದಾರೆ ಎಂದರೆ ನಮಗೆಲ್ಲರಿಗೂ ಹೇಳಿದಂತೆ. ಆದ್ದರಿಂದ ಬಿರ್ಲಾ, ಟಾಟಾ, ಅಂಬಾನಿಗಳು ಆಗಬೇಕೆಂಬ ಪ್ರಯತ್ನವನ್ನು ಬಿಟ್ಟು ಶ್ರೀಕೃಷ್ಣ ಪರಮಾತ್ಮನು ಹೇಳಿದಂತೆ ಯೋಗಿ ಆಗಲು ಪ್ರಯತ್ನಿಸಬೇಕು. ಧ್ಯಾನ ಮಾಡಬೇಕು. ಧ್ಯಾನ ಮಾಡುವುದಕ್ಕಿಂತ ಉತ್ತಮವಾದ ಕೆಲಸ ಈ ಭೂಲೋಕದಲ್ಲಿ ಮಾನವರಿಗೆ ಮತ್ತೊಂದು ಇಲ್ಲ ಎಂದು ತಿಳಿದುಕೊಳ್ಳಬೇಕು. ಅದೇ ಕೃಷ್ಣ ಪರಮಾತ್ಮನು ತಿಳಿಸಿರುವ ಸಂದೇಶ.

ನಾವು ಮತ್ತೊಂದನ್ನು ಗುರುತಿಸಬೇಕು. ನಾವು ಎಷ್ಟೇ ಪ್ರಯತ್ನಿಸಿದರು ಟಾಟಾ, ಬಿರ್ಲಾ, ಅಂಬಾನಿ ಆಗಲು ಸಾಧ್ಯವಿಲ್ಲ, ಅದಕ್ಕೆ ಕಾರಣ ಅರ್ಹತೆ ಇರಬೇಕು. ಆದರೆ ಧ್ಯಾನ ಮಾಡಿದರೆ ಖಂಡಿತವಾಗಿ ಯೋಗಿ ಆಗಬಲ್ಲೆವು. ಆ ರೀತಿ ಯೋಗಿಗಳಾಗುವ ಅರ್ಹತೆ, ಧ್ಯಾನ ಮಾಡುವ ಶಕ್ತಿ ಪ್ರತಿಯೊಬ್ಬರಿಗೂ ಇದೆ. ಆದುದರಿಂದ ಎಲ್ಲರೂ ಧ್ಯಾನ ಮಾಡಿ ಪರಮಾತ್ಮರು ಹೇಳಿದಂತೆ ಯೋಗಿಗಳಾಗಿ.

ಅಷ್ಟೇ ಅಲ್ಲದೇ, ಉತ್ತರ ಗೀತೆಯಲ್ಲಿ ಪೂಜೆಗಳು, ಸ್ತೋತ್ರಗಳು, ಜಪಗಳಿಗಿಂತ ಬ್ರಹ್ಮನನ್ನು ಪಡೆಯುವ ಧ್ಯಾನ ಬಹಳ ಉತ್ತಮವಾದದ್ದು ಎಂದು ಈ ಶ್ಲೋಕದ ಮೂಲಕ ವಿವರಿಸಲ್ಪಟ್ಟಿದೆ.

**ಶ್ಲೋಕ:ಪೂಜಾಕೋಟಿ ಸಮಂ ಸ್ತೋತ್ರಂ, ಸ್ತೋತ್ರ ಕೋಟಿ ಸಮಂ ಜಪಂ**

**ಜಪಕೋಟಿ ಸಮಂ ಧ್ಯಾನಂ, ಧ್ಯಾನಕೋಟಿ ಸಮೋಲಯಃ॥**

**ತಾತ್ಪರ್ಯ:** ಕೋಟಿ ಪೂಜೆಗೆ ಸಮಾನ ಸ್ತೋತ್ರವೆಂದು, ಅಂತಹ ಕೋಟಿ ಸ್ತೋತ್ರಗಳಿಗೆ ಸಮಾನಾ ಜಪವೆಂದು, ಅಂತಹ ಕೋಟಿ ಜಪಗಳಿಗೆ ಸಮಾನ ಧ್ಯಾನವೆಂದು, ಅಂತಹ ಕೋಟಿ ಧ್ಯಾನಗಳಿಗೆ ಸಮಾನ ಲಯವೆಂದು ಅರ್ಥ.

ಇದರಿಂದ ಎಲ್ಲದಕ್ಕಿಂತ ಪರಬ್ರಹ್ಮನನ್ನು ಆಶ್ರಯಿಸುವ ಧ್ಯಾನ ಬಹಳಷ್ಟು ಉತ್ತಮವಾದದ್ದು ಎಂದು ಅರ್ಥ ಮಾಡಿಕೊಳ್ಳಬೇಕು. ಅಂತಹ ಧ್ಯಾನದಿಂದ ಮನಸ್ಸನ್ನು ಶೂನ್ಯವಾಗಿಸಬಹುದು ಅಂದರೆ ಮೋಕ್ಷವನ್ನು ಪಡೆಯಬಹುದು, ದುಃಖವನ್ನು ಪೂರ್ತಿಯಾಗಿ ದಾಟಬಹುದು.

ಸಹಜವಾಗಿ ಜಗತ್ತಿನಲ್ಲಿ ಮರ, ಗಿಡ, ಪಕ್ಷಿ, ಪ್ರಾಣಿ, ವಿಗ್ರಹ, ಗ್ರಾಮ ದೇವತೆ, ಪ್ರಕೃತಿ ದೇವತೆಗಳನ್ನು ಆರಾಧಿಸುತ್ತಿರುತ್ತಾರೆ. ಆದರೆ, ಯಾರಿಗೂ ಸಹ ಪರಬ್ರಹ್ಮನ ಬಗ್ಗೆ ಅಥವಾ ಪರಬ್ರಹ್ಮನ ಶಕ್ತಿಯ ಬಗ್ಗೆ ಪರಬ್ರಹ್ಮನನ್ನು ಆರಾಧಿಸಿದರೆ ಲಭಿಸುವ ಲಾಭಗಳ ಬಗ್ಗೆ ತಿಳುವಳಿಕೆ ಇಲ್ಲ.



ಅಷ್ಟೇ ಅಲ್ಲದೇ, ಪರಬ್ರಹ್ಮನನ್ನು ಆರಾಧಿಸುವ ಅಂದರೆ ಆಶ್ರಯಿಸುವ ಧ್ಯಾನ ಮಾರ್ಗದ ಬಗ್ಗೆಯೂ ಸಹ ಸರಿಯಾದ ತಿಳುವಳಿಕೆ ಇಲ್ಲ.

ಭಗವದ್ಗೀತೆಯಲ್ಲಿ ಮಾತ್ರವೇ ಅಲ್ಲ ಯೋಗವಾಶಿಷ್ಠದ ಮೂಲಕ ಬ್ರಹ್ಮರ್ಷಿ ವಸಿಷ್ಠರು ಸಹ ದೇವತೆಗಳನ್ನು ಆರಾಧಿಸುವುದಕ್ಕಿಂತ ಬ್ರಹ್ಮನನ್ನು ಆರಾಧಿಸುವುದರಿಂದ ಪಡೆಯುವ ಲಾಭಗಳನ್ನು ಈ ಶ್ಲೋಕದ ಮೂಲಕ ತಿಳಿಸಿದ್ದಾರೆ.

**ಶ್ಲೋಕ:ತೇವಾನ್ದೇವಯ ಜೊ ಯಾರ್ತಿ ಯಕ್ಷಾ ಯಕ್ಷಾಸ್ತ್ರಜನ್ತಿಹಿ**

**ಬ್ರಹ್ಮ ಬ್ರಹ್ಮಯಚೊಯಾನ್ತಿಯದರುಚ್ಛಂ ತಥಾಶ್ರಯೇತ್**

**ತಾತ್ಪರ್ಯ:** ದೇವತೆಗಳನ್ನು ಧ್ಯಾನಿಸುವವರು ದೇವತೆಗಳನ್ನೇ ಪಡೆಯುತ್ತಾರೆ. ಯಕ್ಷರನ್ನು ಧ್ಯಾನಿಸುವವರು ಯಕ್ಷರನ್ನೇ ಪಡೆಯುತ್ತಾರೆ. ಆದರೆ ಬ್ರಹ್ಮನನ್ನು ಧ್ಯಾನಿಸುವವರು ಬ್ರಹ್ಮನನ್ನು ಪಡೆಯುತ್ತಾರೆ. ಆದ್ದರಿಂದ ಯಾವುದು ಮಹೋನ್ನತವಾದದ್ದೊ... ಅದನ್ನು ಪಡೆಯಲು ಪ್ರಯತ್ನಿಸಬೇಕು.

ವಸಿಷ್ಠರ ಸಂದೇಶದ ಪ್ರಕಾರ... ಸೃಷ್ಟಿಯಲ್ಲಿ ಎಲ್ಲರಿಗಿಂತ, ಎಲ್ಲದಕ್ಕಿಂತ ಮಹಿಮಾನ್ವಿತನು ಪರಬ್ರಹ್ಮ ಅಂದರೆ ಆತ್ಮ. ಆತ್ಮವನ್ನು ಧ್ಯಾನಿಸಿದರೆ ಸಮಸ್ತ ಜ್ಞಾನವನ್ನು ಪಡೆಯಬಲ್ಲರು. ಸಮಸ್ತ ಕರ್ಮಗಳು ದಗ್ಧವಾಗುತ್ತವೆ. ಸಮಸ್ತ ದುಃಖಗಳು ದೂರವಾಗು ತ್ತವೆ. ಆದ್ದರಿಂದ ಭೋಗಗಳನ್ನು ನೀಡುವ ದೇವತೆಗಳನ್ನು ಆರಾಧಿಸುವುದರ ಬದಲು ಸಮಸ್ತ ಲಾಭಗಳನ್ನು ಹೊಂದಲು ಸಾಧ್ಯವಾಗುವ ಪರಬ್ರಹ್ಮನನ್ನು ಆರಾಧಿಸಬೇಕು. ಅಂದರೆ ಧ್ಯಾನ ಮಾಡಬೇಕು.. ಇದೇ ವಶಿಷ್ಠರ ಸಂದೇಶ.

ಅಷ್ಟೇ ಅಲ್ಲದೆ, ಪರಬ್ರಹ್ಮ ಸಮಸ್ತ ಪ್ರಾಣಿಗಳ ಸ್ನೇಹಿತನು. ಯೋಗಿಗಳ ಪ್ರಿಯಕರ, ಭಕ್ತರ ಭಗವಂತ, ದೇವತೆಗಳೆಲ್ಲರಿಗೂ ದೈವತ್ವ ಸಂಪನ್ನನು. ಎಲ್ಲರ ಹೃದಯಗಳ ಸ್ಪಂದನಕರ್ತ, ಮನಃಸ್ಫುರಣೆಗೆ, ಬುದ್ಧಿ ನಿರ್ಣಯಗಳಿಗೆ ಆಧಾರಭೂತನು, ಸ್ಫೂರ್ತಿದಾತನು, ಸರ್ವಾಧಿಕಾರಿ, ಸರ್ವಾಂತರ್ಯಾಮಿ, ಸರ್ವಜ್ಞನಾದ ಆ ಪರಬ್ರಹ್ಮ ಯಾವಾಗಲೂ ನಿಮ್ಮೊಂದಿಗೆ ಇರುತ್ತಿದ್ದಾನೆ.

ದೇಹ ಸ್ಥಿತಿ ಕುಗ್ಗಿದರು, ಸ್ನೇಹಿತರೆಲ್ಲರೂ ಬಿಟ್ಟು ಹೊರಟು ಹೋದರು, ಸಂಬಂಧ ಬಾಂಧವ್ಯಗಳು ಮುರಿದುಬಿದ್ದರೂ ನಿನ್ನನ್ನು ಬಿಡದೆ ಇರುವ ಆ

ಪರಮಾತ್ಮ, ಭಗವಂತ, ಸ್ನೇಹಿತ, ಪರಬ್ರಹ್ಮನನ್ನು ಪಡೆಯಲು ಅನುಕ್ಷಣ ಪ್ರಯತ್ನಿಸಬೇಕು.

ಅಷ್ಟೇ ಅಲ್ಲದೇ, ಯಜುರ್ವೇದದಲ್ಲಿ ಈ ರೀತಿ ತಿಳಿಸಿದ್ದಾರೆ

**ಶ್ಲೋಕ: "ತಸ್ಯ ಯೋನಿಂ ಪರಿಪಶ್ಯಂತಿ ಧೀರಾಸ್ತಸ್ಮಿನ್ಹ**
**ತಸ್ಥುರ್ ಭುವನಾನಿ ವಿಶ್ವಾ"**

**(ಯಜುರ್ವೇದ – 31–19)**

ವಿದ್ವಾಂಸರು, ಆ ಪರಬ್ರಹ್ಮ ಪ್ರಾಪ್ತಿಗೆ ಕಾರಣಗಳಾದ ಸತ್ಯಾಚಾರಣೆಯನ್ನು, ಸತ್ಯ ವಿದ್ಯೆಯನ್ನು ಧ್ಯಾನದಲ್ಲಿ ಅರಿತು ಪರಮೇಶ್ವರನನ್ನು ಪಡೆಯುತ್ತಾರೆ. ಆತನಲ್ಲಿಯೇ ಜ್ಞಾನಿಗಳು ಸತ್ಯನಿಶ್ಚಯದಿಂದ ಮೋಕ್ಷ ಸುಖವನ್ನು ಪಡೆದು ಜನನ

ರಿಮರಣ ರೂಪಗಳಾದ ಹೋಗು ಬರುವಿಕೆಗಳಿಂದ ಹೊರಬಂದು ಆನಂದದಲ್ಲಿ ತಲ್ಲೀನರಾಗಿರುತ್ತಾರೆ.

**(ಸ್ವಾಮಿ ದಯಾನಂದ – ಪಂಡಿತ್ ಗೋಪ್ದೇವ್ ಆಧಾರದಿಂದ)**



ಸ್ವಾಮಿ ದಯಾನಂದ ಸರಸ್ವತಿ

ಆದುದರಿಂದ, ಈ ಬ್ರಹ್ಮ ಜ್ಞಾನವನ್ನು ಪಡೆಯಲು ಮಹತ್ತರವಾದ ಸಾಧನೆ ಧ್ಯಾನ ಎಂದು ತಿಳಿದುಕೊಂಡು ಧ್ಯಾನದ ಮೂಲಕ ಬ್ರಹ್ಮ ಜ್ಞಾನವನ್ನು ಪಡೆದು ಜೀವನವನ್ನು ಧನ್ಯ ಮಾಡಿಕೊಳ್ಳೋಣ.

# ಧ್ಯಾನ ಮಾಡುವ ಪದ್ಧತಿ:



**ಉಸಿರಾಟದ ಮೇಲೆ ಗಮನ :** ಅವರಿಗೆ ತಕ್ಕ ಸುಖಾಸನದಲ್ಲಿ ಅವರು ಹಾಯಾಗಿ ಕುಳಿತು... ಕೈಗಳೆರಡನ್ನು ಕಟ್ಟಿ... ಕಣ್ಣೆರಡು ಮುಚ್ಚಿಕೊಂಡು... ಪ್ರಕೃತಿ ಸಹಜವಾಗಿ ನಡೆಯುತ್ತಿರುವ ಉಚ್ಛ್ವಾಸ ನಿಶ್ವಾಸಗಳನ್ನು ಗಮನಿಸುತ್ತಾ ಇರಬೇಕು!

ನಡುವೆ ಹಲವಾರು ಆಲೋಚನೆಗಳು ಬರುತ್ತಿದ್ದರು... ಅದನ್ನು ಆಗಿಂದಾಗ್ಗೆ ನಿಲ್ಲಿಸಿ... ಮತ್ತೆ ಮತ್ತೆ ಉಸಿರಾಟದ ಮೇಲೆ ಗಮನ ಹರಿಸುತ್ತಾ... ಗಮನವನ್ನು ಕೇಂದ್ರೀಕರಿಸುತ್ತಿದ್ದರೆ... ಕ್ರಮೇಣ ಆಲೋಚನಾ ರಹಿತ ಸ್ಥಿತಿ ಮೂಡುತ್ತದೆ. ಚಿತ್ತ ವೃತ್ತಿಗಳು ನಿಂತು ಹೋಗುತ್ತವೆ. ಮನಸ್ಸು ನಿರ್ವಿಷಯವಾಗಿ ಶೂನ್ಯವಾಗುತ್ತದೆ. ಮನಸ್ಸು ಶಾಂತಿಸುತ್ತದೆ. ಇದೇ ಧ್ಯಾನ ಸ್ಥಿತಿ.

ಇದೆ ಆಲೋಚನಾ ರಹಿತ ಸ್ಥಿತಿ ಈ ಸ್ಥಿತಿಯಲ್ಲಿ ವಿಶ್ವಮಯ ಪ್ರಾಣಶಕ್ತಿ ಅಪಾರವಾಗಿ ಶರೀರದೊಳಗೆ ಪ್ರವೇಶಿಸಿ ನಾಡಿಮಂಡಲವನ್ನು ಶುದ್ಧಿ ಮಾಡುತ್ತದೆ. ಆ ಶಕ್ತಿಯಿಂದ ರೋಗಗಳೆಲ್ಲವೂ ಕಡಿಮೆಯಾಗುತ್ತವೆ. ನಾಡೀಮಂಡಲ ಶುದ್ಧಿಯಿಂದ ಕರ್ಮಗಳು ದಗ್ಧವಾಗುತ್ತವೆ. ಪ್ರತಿನಿತ್ಯ ಯಾರ ವಯಸ್ಸು ಎಷ್ಟಿರುತ್ತದೆಯೋ ಕನಿಷ್ಠ ಅಷ್ಟು ನಿಮಿಷಗಳು ಕಡ್ಡಾಯವಾಗಿ ದಿನಕ್ಕೆ ಎರಡು ಬಾರಿ ಧ್ಯಾನ ಮಾಡಬೇಕು.

# ಪಿರಮಿಡ್ ಧ್ಯಾನಿಗಳ ತತ್ವಸಾರ

ಜ್ಞಾನ ನವರತ್ನಗಳು

ಆತ್ಮವೇ ಪರಬ್ರಹ್ಮ

ಜೀವಿಯೇ ದೇವರು, ದೇಹವೇ ದೇವಾಲಯ

ಉಸಿರೇ ಗುರು, ಸಮಯವೇ ಸಾಧನೆ

ಸಹನೆಯೆ ಪ್ರಗತಿ, ಅನುಭವವೇ ಜ್ಞಾನ

ದಾನವೇ ಧರ್ಮ, ಧರ್ಮವೇ ಪುಣ್ಯ



# "ಧ್ಯಾನ ಮಾಡುವ ವಿಧಾನ"

**ಯಾವುದಾದರೂ ಸುಖಾಸನದಲ್ಲಿ .. ಹಾಯಾಗಿ ಕುಳಿತುಕೊಂಡು ..**
**ಕೈಗಳೆರಡೂ ಸೇರಿಸಿಕೊಂಡು .. ಕಣ್ಣೆರಡೂ ಮುಚ್ಚಿಕೊಂಡು ..**
**ಪ್ರಕೃತಿ ಸಹಜವಾಗಿ ನಡೆಯುತ್ತಲಿರುವ ಉಚ್ಛ್ವಾಸ, ನಿಶ್ವಾಸಗಳನ್ನೇ ..**
**ಏಕಧಾರೆಯಾಗಿ .. ಗಮನಿಸುತ್ತಾ ಇರಬೇಕು!**

**ಧ್ಯಾನವನ್ನು ಯಾರಾದರೂ ಮಾಡಬಹುದು**
**ಯಾವ ವಯಸ್ಸಿನವರಾದರೂ ಮಾಡಬಹುದು**
**ಯಾವ ಸಮಯದಲ್ಲಿಯಾದರೂ ಮಾಡಬಹುದು**
**ಯಾವ ಸ್ಥಳದಲ್ಲಿಯಾದರೂ ಮಾಡಬಹುದು.**

ಧ್ಯಾನವನ್ನು ನಿಯಮಿತವಾಗಿ ತಪ್ಪದೇ ಮಾಡಬೇಕು....
ಅವರವರ ವಯಸ್ಸಿಗೆ ಅನುಗುಣವಾಗಿ ಪ್ರತಿಯೊಬ್ಬರೂ, ಪ್ರತಿನಿತ್ಯವೂ ಧ್ಯಾನ ಮಾಡಬೇಕು
ಉದಾಹರಣೆಗೆ, ನಿಮ್ಮ ವಯಸ್ಸು ಇಪ್ಪತ್ತು ವರ್ಷಗಳಾಗಿದ್ದರೆ, ಇಪ್ಪತ್ತು ನಿಮಿಷಗಳ ಕಾಲ ಧ್ಯಾನ ಮಾಡಬೇಕು.
ನಿಮ್ಮ ವಯಸ್ಸು ನಲವತ್ತು ವರ್ಷಗಳಾಗಿದ್ದರೆ ನಲವತ್ತು ನಿಮಿಷಗಳ ಕಾಲ
ಹೀಗೆ ವಯಸ್ಸಿಗೆ ಅನುಗುಣವಾಗಿ ಧ್ಯಾನ ಮಾಡಬೇಕು.

## ಬ್ಯಾಂಕ್ ಖಾತೆಗೆ ಹಣ ಪಾವತಿಸಿ ಚಂದಾದಾರರಾಗಬಹುದು

| | | |
|---|---|---|
| ಬ್ಯಾಂಕ್ ಹೆಸರು | : ಭಾರತೀಯ ಸ್ಟೇಟ್ ಬ್ಯಾಂಕ್ | – State Bank of India |
| ಶಾಖೆಯ ಹೆಸರು | : ಚಾಮರಾಜಪೇಟೆ ಶಾಖೆ | – Chamarajapete Branch |
| ಖಾತೆ ಸಂಖ್ಯೆ | : 30828057680 : I.F.S.C. ಕೋಡ್ | – S.B.I.N 0005794 |
| ಖಾತೆಯ ಹೆಸರು | : ಕೆ.ಪಿ.ಡಿ.ಪಿ. ಟ್ರಸ್ಟ್–ಅಕೌಂಟ್–ಧ್ಯಾನ ಕಸ್ತೂರಿ | – K.P.D.P. Trust A/c. Dhayana Kasturi |

ಧ್ಯಾನ ಕಸ್ತೂರಿ ಮಾಸ ಪತ್ರಿಕೆಗೆ ಆನ್‌ಲೈನ್‌ನಲ್ಲಿಯೇ ಚಂದಾದಾರರಾಗಬಹುದು.
ಕನ್ನಡ ಆಧ್ಯಾತ್ಮಿಕ ಪುಸ್ತಕಗಳನ್ನು ಆನ್‌ಲೈನ್‌ನಲ್ಲಿಯೇ ಖರೀದಿಸಬಹುದು. ಇದಕ್ಕಾಗಿ
ನಿಮ್ಮ ಮೊಬೈಲ್ ಬಳಸಿ ಪಕ್ಕದಲ್ಲಿರುವ ಕ್ಯೂ ಆರ್ ಕೋಡನ್ನು ಸ್ಕ್ಯಾನ್ ಮಾಡಿ,
ನಂತರ ಕಾಣಿಸಿಕೊಳ್ಳುವ ಲಿಂಕ್ ಅನ್ನು ಕ್ಲಿಕ್ ಮಾಡಿ.



ಹೆಚ್ಚಿನ ವಿವರಗಳಿಗಾಗಿ ಸಂಪರ್ಕಿಸಿ
ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್ (ರಿ)
# 1534/1, ಒಂದನೇ ಮಹಡಿ 26ನೇ ಮುಖ್ಯರಸ್ತೆ, ರಾಗಿಗುಡ್ಡ ಆಂಜನೇಯ ದೇವಸ್ಥಾನದ ಹತ್ತಿರ
9ನೇ ಬ್ಲಾಕ್, ಜಯನಗರ, ಬೆಂಗಳೂರು – 560 069
ವಾಟ್ಸಾಪ್ ಅಥವಾ ಕರೆಮಾಡಿ : 7618731963; 9901598073



ಜ್ಞಾನದಲ್ಲಿ ಎರಡು ವಿಧಗಳು (೧) ಸತ್ಯ ಜ್ಞಾನ (೨) ಅಸತ್ಯಜ್ಞಾನ. ಭಗವಂತನಿಗೆ ಸಂಬಂಧಿಸಿದ ಜ್ಞಾನವನ್ನು ಸತ್ಯ ಜ್ಞಾನವೆನ್ನುತ್ತಾರೆ. ಭಗವಂತನಿಗೆ ಸೃಷ್ಟಿಗೆ ಸಂಬಂಧಿಸಿದ ಜ್ಞಾನವನ್ನು ಅಸತ್ಯ ಜ್ಞಾನವೆನ್ನುತ್ತಾರೆ. ಆದ್ದರಿಂದ ಭಗವಂತನ ಬಗ್ಗೆ ಭಗವಂತನ ಸೃಷ್ಟಿಯಲ್ಲಿನ ಜೀವಿಗಳ ಬಗ್ಗೆ ತಿಳಿದುಕೊಳ್ಳುವದೇ ಜ್ಞಾನ. ಇವುಗಳ ಬಗ್ಗೆ ಅವಗಾಹನೆ (ಅರಿವು) ಇರುವವರನ್ನು ಜ್ಞಾನಿ ಎನ್ನುತ್ತಾರೆ. ಅವಗಾಹನೆ ಇಲ್ಲದವರನ್ನು ಅಜ್ಞಾನಿ ಎನ್ನುತ್ತಾರೆ.

ಈ ಜ್ಞಾನವಿರುವವರು ಸೃಷ್ಟಿಗೆ, ಸೃಷ್ಟಿ ಧರ್ಮಗಳಿಗೆ ಅನುಗುಣವಾಗಿ ಪ್ರವರ್ತಿಸುತ್ತಾರೆ. ಆನಂದದಿಂದ ಜೀವಿಸುತ್ತಾರೆ. ಈ ಜ್ಞಾನ ಇಲ್ಲದವರು ಸೃಷ್ಟಿಗೆ, ಸೃಷ್ಟಿ ಧರ್ಮಗಳಿಗೆ ವಿರುದ್ಧವಾಗಿ ಪ್ರವರ್ತಿಸುತ್ತಾರೆ. ಕಷ್ಟಗಳ ಪಾಲಾಗುತ್ತಾರೆ. ದುಃಖವನ್ನು ಹೊಂದುತ್ತಾರೆ. ಅಂದರೆ ಮಾನವನ ದುಃಖಕ್ಕೆ ಕಾರಣ ಜ್ಞಾನ ಇಲ್ಲದೇ ಇರುವುದು. ಆದ್ದರಿಂದ ಅನಂತವಾದ ಈ ಜ್ಞಾನದ ಬಗ್ಗೆ ಸ್ವಲ್ಪವಾದರೂ ತಿಳಿಯಪಡಿಸುವ ಪ್ರಯತ್ನವೇ ಈ 'ಜ್ಞಾನಜ್ಯೋತಿ'.

ತಟವರ್ತಿ ವೀರರಾಘವರಾವು

**ಪಿರಮಿಡ್ ಸ್ಪಿರಿಚ್ಯುಯಲ್ ಸೊಸೈಟೀಸ್ ಮೂವ್‌ಮೆಂಟ್, ಇಂಡಿಯಾ**

ಧ್ಯಾನದ ಬಗ್ಗೆ ಮತ್ತಷ್ಟು ಸಮಾಚಾರಕ್ಕಾಗಿ ಈ ಕೆಳಗಿನ ವೆಬ್‌ಸೈಟ್ ಸಂದರ್ಶಿಸಿ

https: //www.youtube.com/pmckannada • www.meditationeverywhere.org • www.pssmovement.org

**ಶ್ರೀರಾಮ ಪಬ್ಲಿಕೇಶನ್ಸ್**

ಶ್ರೀರಾಮಧಾಮ ಧ್ಯಾನಕೇಂದ್ರ,

ನಾರಾಯಣಪ್ಪ ಗಾರ್ಡನ್, ವೈಟ್ ಫೀಲ್ಡ್, ಬೆಂಗಳೂರು - 560 066

**ಸಂಪರ್ಕಿಸಿ : ಹೆಚ್.ಎಸ್. ಶ್ರೀನಿವಾಸ / 9449695503**

**ವಿಜಯಲಕ್ಷ್ಮಿ ಎಸ್.ಎಸ್ / 8050082689**